




ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವಾರಿ ಸೇವೆ

## ಭಕ್ತರಿಗೆ ಸ್ವಚ್ಛಂದ ಸೇವಾವಕಾಶ

ಶ್ರೀ ವೆಂಕಟೇಶ್ವರ ಸ್ವಾಮಿಯು ನೆಲೆಸಿರುವ ಪವಿತ್ರವಾದ ತಿರುಮಲೆಗೆ ವರ್ಷಂಪ್ರತಿ ಲಕ್ಷಾಂತರ ಮಂದಿ ಭಕ್ತರು ಬಂದು ಹೋಗುತ್ತಾರೆ. ದೇಶದ ನಾನಾ ಭಾಗಗಳಿಂದ ಬರುವ ಈ ಯಾತ್ರಿಕರ ಸೇವೆಯಲ್ಲಿ ಮತ್ತೂ ಹೆಚ್ಚಿನ ಅನುಕೂಲಗಳನ್ನುಂಟುಮಾಡಲೆಂದು ತಿರುಮಲ ತಿರುಪತಿ ದೇವಸ್ಥಾನಗಳು "ಶ್ರೀವಾರಿ ಸೇವೆ"ಯನ್ನು ಆರಂಭಿಸಿದೆ.

ಸೇವಾ ಮನೋಭಾವವನ್ನು ಹೆಚ್ಚಿಸಿ, ಸೌಹಾರ್ದತೆಯನ್ನು ಬೆಳೆಸಿ ಭಕ್ತಿಭಾವವನ್ನು ಸರ್ವತ್ರ ಹರಡುವಂತಹ ಒಂದು ವಿಶಿಷ್ಟವಾದ ಅವಕಾಶವನ್ನು ಈ ಸೇವೆಯು ಒದಗಿಸುತ್ತದೆ. ಶ್ರುತಿ ಸ್ಮೃತಿಗಳು ಹೇಳುವಂತೆ ಗರ್ಭಗೃಹದಲ್ಲಿರುವ ಸ್ವಾಮಿಯನ್ನು ಆರಾಧಿಸುವುದರ ಮೂಲಕವಾಗಿ ಮಾತ್ರವೇ ಅಲ್ಲದೆ, ಆತನ ಭಕ್ತರ ಸೇವೆಯನ್ನು ಮಾಡುವುದರಿಂದಲೂ ದೈವಾನುಗ್ರಹವನ್ನು ಪಡೆಯಬಹುದು. ಹೀಗಾಗಿ "ಶ್ರೀವಾರಿ ಸೇವೆ"ಯು ಸ್ವಾಮಿಯ ಭಕ್ತರನ್ನು ನಿಸ್ವಾರ್ಥದಿಂದ ಸೇವಿಸುವುದರ ಮೂಲಕ ಶ್ರೀನಿವಾಸ ದೇವರ ಸೇವೆ ಮಾಡಿ ಅಧಿಕ ಫಲ ಪಡೆಯುವಂತೆ ಮಾಡುವುದು.

ಭಕ್ತರು ತಮ್ಮ ಸ್ವಯಂಸೇವೆಯನ್ನು ಕೆಳಕಂಡ ಕ್ಷೇತ್ರಗಳಲ್ಲಿ ಮಾಡಬಹುದಾಗಿದೆ-

1. ಅನ್ನದಾನ ಯೋಜನೆ, 2. ಸರತಿಯ ಸಾಲು, 3. ಕಲ್ಯಾಣಕಟ್ಟೆ, 4. ಕಾಲುಹಾದಿಯ ಯಾತ್ರಿಕರಿಗೆ ನೆರವು ನೀಡುವಿಕೆ, 5. ಸಾಮಾನುಗಳನ್ನು ಭದ್ರಗೊಳಿಸುವ ಕೋಣೆ, 6. ವಾಹನ ನಿಲ್ದಾಣ, 7. ಉಚಿತ ವಸ್ತು ಸಾಗಣೆ ಕೇಂದ್ರ, 8. ಸ್ವಾಮಿ ಪುಷ್ಕರಿಣಿ 9. ಸಮಾಚಾರ ಕೇಂದ್ರ, 10. ಶ್ರೀವಾರಿ ಆಲಯ.

ಯಾತ್ರಿಕರು ತಮ್ಮ ಅಪೇಕ್ಷೆ, ಆಸಕ್ತಿಗಳಿಗೆ ತಕ್ಕಂತೆ ಸೇವಾ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳಬಹುದು. ಅನ್ನದಾನಂ ಭವನದಲ್ಲಿ ಕೆಲಸ ಮಾಡುತ್ತಿರುವ ಕೌಂಟರಿನಲ್ಲಿ ತಮ್ಮ ಹೆಸರನ್ನು ಕೂಡಲೇ ನೊಂದಾವಣೆ ಮಾಡಿಕೊಳ್ಳಬಹುದು. ಹತ್ತು ಮಂದಿಗೆ ಕಡಿಮೆಯಿಲ್ಲದಂತೆ ಒಂದು ಗುಂಪಿನಲ್ಲಿ ಒಂದು ವಾರಕ್ಕೆ ಕಡಿಮೆಯಾಗದಂತೆ ಸೇವೆ ಸಲ್ಲಿಸಬಯಸುವವರು ಮೊದಲೇ ತಿಳಿಸಿ ಸೇವೆಯಲ್ಲಿ ಭಾಗವಹಿಸಬಹುದು. ಇವರಿಗೆ ಉಚಿತ ವಸತಿ ಹಾಗೂ ಭೋಜನ ಸೌಕರ್ಯವನ್ನು ತಿರುಮಲೆಯಲ್ಲಿ ಒದಗಿಸಲಾಗುವುದು. ಭಜನ ಸಂಘಗಳೂ ಸ್ಫೂರ್ತಿದಾಯಕವಾದ ಈ ಸೇವೆಯಲ್ಲಿ ಭಾಗವಹಿಸಬಹುದು.

"ಶ್ರೀವಾರಿಸೇವೆ"ಯಲ್ಲಿ ಪಾಲು ಹಂಚಿಕೊಳ್ಳಬಯಸುವ ಯಾತ್ರಿಕ ಭಕ್ತರು ತಿರುಮಲೆಯ ಅನ್ನದಾನಂ ಸಮುದಾಯ ಭವನದಲ್ಲಿರುವ ಶ್ರೀವಾರಿ ಸೇವೆ ವಿಭಾಗದಲ್ಲಿ ತಮ್ಮ ಹೆಸರನ್ನು ನಮೂದಿಸಿಕೊಳ್ಳಬೇಕೆಂದು ಕೋರಲಾಗಿದೆ.

ಹೆಚ್ಚಿನ ವಿವರಗಳಿಗೆ : **ಶ್ರೀವಾರಿಸೇವೆ ವಿಭಾಗ ಅನ್ನದಾನಂ ಕಾಂಪ್ಲೆಕ್ಸ್** - ತಿರುಮಲ, **ದೂರವಾಣಿ - 08574 - 79693.**

**ಪೌರಸಂಬಂಧಾಧಿಕಾರಿಗಳು**, ತಿ. ತಿ. ದೇವಸ್ಥಾನಗಳು - ತಿರುಪತಿ. **ದೂರವಾಣಿ - 08574 - 32813.**

**ಕಾರ್ಯನಿರ್ವಹಣಾಧಿಕಾರಿ**







ವೆಂಕಟಾಚಲ ನಿಲಯಂ ವೈಕುಂಠ ಪುರವಾಸಂ
ಪಂಕಜ ನೇತ್ರಂ ಪರಮಪವಿತ್ರಂ ॥ ಪ ॥

ಶಂಖ ಚಕ್ರಧರ ಚಿನ್ಮಯ ರೂಪಂ ॥ ಅ.ಪ. ॥

ಅಂಬುಜ ಭವ ವಿನುತಂ ಅಗಣಿತ ಗುಣಧಾಮಂ
ತುಂಬುರು ನಾರದ ಗಾನವಿನೋದಂ
ಅಂಬುಧಿ ಶಯನಂ ಆತ್ಮಾಭಿರಾಮಂ ॥ 1 ॥

ಪಾಹಿ ಪಾಂಡವ ಪಾಲಂ ಕೌರವ ಮದಹರಣಂ
ಬಾಹು ಪರಾಕ್ರಮ ಫಣಿಪತಿ ಶಯನಂ
ಅಹಲ್ಯಾಶಾಪ ವಿಮೋಚನ ಚರಣಂ ॥ 2 ॥

ಸಕಲ ವೇದ ವಿಚಾರಂ ಸರ್ವಜೀವಿನೇತಾರಂ
ಮಕರಕುಂಡಲಧರ ಮದನಗೋಪಾಲಂ
ಭಕುತ ವಿಪೋಷಕ ಪುರಂದರ ವಿಠಲಂ ॥ 3 ॥

- ಶ್ರೀ ಪುರಂದರದಾಸರು.





# ಹೊಸ ಸೇವಾವಕಾಶ

**I. ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ :**

1. **ಅಷ್ಟದಳ ಪಾದ ಪದ್ಮಾರಾಧನೆ :** 23-7-2001 ರಿಂದ ಪ್ರತಿ ಸೋಮವಾರ ಶ್ರೀ ಪದ್ಮಾವತೀ ಅಮ್ಮನವರಿಗೆ 108 ಬಂಗಾರದ ಕಮಲ ಗಳಿಂದ ಅರ್ಚನೆ ಮಾಡಲಾಗುತ್ತಿದೆ. ರೂ. 1500/- ಶುಲ್ಕದಲ್ಲಿ ಐದು ಮಂದಿಗೆ ಪ್ರವೇಶಾವಕಾಶವಿರುವ ಈ ಸೇವೆಯಲ್ಲಿ ಉತ್ತರೀಯ ಹಾಗೂ ಕುಪ್ಪಸದ ಕಣದ ಬಹುಮಾನವಿದೆ. ಹತ್ತು ಗ್ರಾಂಗಳ ಬೆಳ್ಳಿಯ ಪದಕವನ್ನು ನೀಡಲಾಗುತ್ತದೆ.

2. **ಶ್ರೀ ಲಕ್ಷ್ಮೀ ಪೂಜೆ :** ಶ್ರಾವಣ ಮಾಸದ ಶುಕ್ರವಾರಗಳಲ್ಲಿ; ತಮಿಳು ತೈಮಾಸದಲ್ಲಿ ಹಾಗೂ ಪ್ರತಿ ಉತ್ತರಾಷಾಢ ನಕ್ಷತ್ರದ ದಿನಗಳಲ್ಲಿ - ಈ ಸೇವೆ ನಡೆಯುತ್ತದೆ. ರೂ. 116/- ಶುಲ್ಕದಿಂದ ಒಬ್ಬರಿಗೆ ಪೂಜೆಯ ಹಾಗೂ ದರ್ಶನದ ಅವಕಾಶವುಂಟು. ಈ ಸೇವೆಯನ್ನು 3-8-2001 ರಿಂದ ಆರಂಭಿಸಲಾಗಿದೆ.

**II. ಶ್ರೀ ಕರಿಯ ಮಾಣಿಕ್ಯಸ್ವಾಮಿ ಆಲಯ, ನಗರಿ :**

ಶ್ರೀ ಕರಿಯ ಮಾಣಿಕ್ಯಸ್ವಾಮಿ ಆಲಯವನ್ನು ಪೆರುಮಾಳ್‌ಸ್ವಾಮಿ ಕೋಯಿಲ್ ಎಂದೂ ಕರೆಯಲಾಗುತ್ತದೆ. 7-10-1994 ರಲ್ಲಿ ತಿ.ತಿ.ದೇ. ಗಳಿಗೆ ಸೇರಿದ ಈ ಆಲಯದ ಜೀರ್ಣೋದ್ಧಾರವಾಗಿ, ಮಹಾದ್ವಾರಗೋಪುರವನ್ನು ಸುಂದರವಾಗಿ ತಿದ್ದಿ ನಿರ್ಮಿಸಲಾಗಿದೆ.

ಇಲ್ಲಿನ ಗರ್ಭಗುಡಿಯ ಹಾಗೂ ಶ್ರೀ ಆಂಡಾಳ್ ಶ್ರೀ ಲಕ್ಷ್ಮಿಯವರ ಉಪ ಆಲಯಗಳ ಜೀರ್ಣೋದ್ಧಾರ ಕಾರ್ಯ ಅಗತ್ಯವಿದ್ದು, ಅದಕ್ಕಾಗಿ ಒಂದು ಬಾಲಾಲಯವನ್ನು ನಿರ್ಮಿಸಲಾಗಿದೆ. ಈ ಬಾಲಾಲಯ ಕಾರ್ಯಕ್ರಮ 2001 ರ ಆಗಸ್ಟ್ 29, 30, 31 ರಂದು ನಡೆದು ಯಶಸ್ವಿಯಾಗಿದೆ. ನಗರಿಯು ತಿರುಪತಿ ಚೆನ್ನೈ ಹೆದ್ದಾರಿಯಲ್ಲಿ ತಿರುಪತಿಯಿಂದ 60 ಕಿ.ಮೀ. ದೂರದಲ್ಲಿದೆ.

**III. ನಾರಾಯಣವನದಲ್ಲಿ ತಿ.ತಿ.ದೇ. ಕಲ್ಯಾಣಮಂಟಪ :** ನಾರಾಯಣವನದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯಕ್ಕೆ ಹೊಂದಿಕೊಂಡಂತೆ ಹಲವು ಉಪ ಆಲಯಗಳೂ ಒಂದು ಹಳೆಯ ಕಲ್ಯಾಣ ಮಂಟಪವೂ ಇವೆ. ನಾರಾಯಣವನದ ಪರಾಶರೇಶ್ವರ ಆಲಯದ ಬಳಿ ಒಂದು ಕಲ್ಯಾಣ ಮಂಟಪದ ನಿರ್ಮಾಣದ ಆಯೋಜನೆಯಾಗಿದ್ದು 5-9-2001 ರಂದು ಈ ಹೊಸ ಕಲ್ಯಾಣ ಮಂಟಪದ ವಾಸ್ತು ಪೂಜೆ ಯಾಯಿತು. ತತ್ಸಂದರ್ಭದಲ್ಲಿ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿಯ ಮೆರವಣಿಗೆಯೂ ನಡೆಯಿತು. ಈ ಕಲ್ಯಾಣ ಮಂಟಪವನ್ನು ವಿವಾಹಾದಿ ಶುಭಕಾರ್ಯಗಳಿಗೆ ನೀಡಲಾಗುತ್ತಿದೆ.

**ಕಾರ್ಯನಿರ್ವಹಣಾಧಿಕಾರಿ,**

ತಿ.ತಿ.ದೇ., ತಿರುಪತಿ.




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ - 32 ನವೆಂಬರ್ 2001 ಸಂಚಿಕೆ - 6

# ಕಾರ್ತೀಕ ಸಂಚಿಕೆ

## ವಿಷಯಸೂಚಿ



ಮುಖಚಿತ್ರ : *ಶ್ರೀ ಪದ್ಮಾವತೀ ಅಮ್ಮನವರು, ತಿರುಚಾನೂರು.*

ಹಿಂಬದಿಯಲ್ಲಿ : *ಪಂಚಮೀ ತೀರ್ಥ.*


ಗೌರವ ಸಂಪಾದಕರು :
**ಡಾ|| ಪಿ. ಕೃಷ್ಣಯ್ಯ**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
**ಡಾ|| ಎನ್.ಎಸ್. ರಾಮಮೂರ್ತಿ**,

ಮುದ್ರಣ :
**ಐ. ಪಾರ್ವತೀಶ್ವರ ರಾವ್**,
ಬಿ.ಎ.,ಎಲ್.ಪಿ..ಟಿ.,
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
**ಬಿ. ಎನ್. ಶ್ರೀನಿವಾಸನ್**, ಎಂ.ಎ.

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ-
*ಸಂಪಾದಕರು*
*ತಿರುಮಲೆ ತಿರುಪತಿ ದೇವಸ್ಥಾನಗಳು,*
*ತಿರುಪತಿ.*

ಸಪ್ತಗಿರಿಯ ಎಲ್ಲ ಭಾಷೆಯ
ಪ್ರತಿಗಳೂ ಎಲ್ಲ
ತಿ.ತಿ.ದೇ.
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ರೂ. 5/-**
**ವಾರ್ಷಿಕ ಚಂದಾ ರೂ. 60/-**
**ಆಜೀವ ಚಂದಾ ರೂ. 500/-**


*ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ||*

# ನಿಮ್ಮೊಡನೆ ಎರಡು ಮಾತು......



ವೇದಗಳಲ್ಲಿ ಎಲ್ಲವೂ ಇವೆ ಎನ್ನುವುದರಲ್ಲಿ ಅತಿಶಯೋಕ್ತಿಯಿಲ್ಲ ಎನ್ನಿಸುವುದುಂಟು. ವಿಮಾನಗಳಿಂದ ಆರಂಭಿಸಿ ಕ್ಷಿಪಣಿಗಳವರೆಗೆ ಎಲ್ಲದರ ಬಗ್ಗೆಯೂ ಸೂಕ್ಷ್ಮವಾಗಿಯೋ ಸೂಚ್ಯವಾಗಿಯೋ ತಿಳಿಸಲಾಗಿದೆ. ಆಧುನಿಕ ಆವಿಷ್ಕಾರಗಳೆನ್ನಲಾಗುವ ಯಂತ್ರ ತಂತ್ರ ವಿಶೇಷಗಳನ್ನು ವರ್ಣಿಸಲೂ, ಹೆಸರಿಸಲೂ, ಈ ಪ್ರಾಚೀನ ಪದಗಳನ್ನೇ ಬಳಸುತ್ತೇವೆ ಎಂಬುದರಿಂದಲೇ ಒಳಗೊಳ್ಳುವಿಕೆಯೆಂಬುದರ ಪರಿಕಲ್ಪನೆ ಆಗುತ್ತದೆ. ವಿಜ್ಞಾನವನ್ನು ಮಾನವ ಜನಾಂಗ ಅಭಿವೃದ್ಧಿಗೆ ಬಳಸಬೇಕೇ ಹೊರತು ವಿನಾಶಕ್ಕೆ ಅಲ್ಲ ಎಂಬುದನ್ನೂ ವಕ್ಕಾಣಿಸಿದೆ ವೇದ.

ಯಾವುದೇ ಮತ ಹಿಂಸೆಯನ್ನು ಪ್ರಚೋದಿಸದು, ಬೋಧಿಸದು. ಯಾವ ನರನೂ ಅಶಾಂತಿಯನ್ನು ಬಯಸುವುದಿಲ್ಲ. ಪ್ರಾಣಿ ಜಗತ್ತಿನಲ್ಲಿ ಮುಂಚೂಣಿಯಲ್ಲಿರುವ ಈ ಜೀವನವನ್ನು ಪ್ರಶಾಂತವಾಗಿ, ಪರಮಾನಂದಮಯವಾಗಿ ನಡೆಸಬೇಕು ಎಂದೇ ಬಯಸುತ್ತಾನೆ. ಎಂತಲೇ ಭಾರತೀಯರು ಅಹಿಂಸೆಯನ್ನು ಪರಮಧರ್ಮವಾಗಿ ಭಾವಿಸಿ ನಡೆದುಕೊಂಡು ಬಂದರು.

ಮಾನವ ಜನಾಂಗದ ವಿಧ್ವಂಸಕ್ಕೆ ಪ್ರಧಾನಕಾರಣ ಪ್ರಕೃತಿ ವೈಪರೀತ್ಯಗಳು, ಪ್ರವಾಹಗಳು, ಭೂಮಿ ಬಿರುಕು ಬಿಡುವ ಕಂಪನಗಳು, ಒಡೆದು ಸಿಡಿಯುವ ಅಗ್ನಿಪರ್ವತಗಳು - ಇವುಗಳನ್ನು ಹದ್ದಿನಲ್ಲಿಡುವುದು ಮನುಷ್ಯನಿಗೆ ಅಸಾಧ್ಯ ಎನ್ನುವಷ್ಟು ಕಷ್ಟ. ಆದರೆ ಈ ವಿನಾಶವನ್ನು ಮೊದಲೇ ಗ್ರಹಿಸುವಷ್ಟು ವಿಜ್ಞಾನವಿದೆಯೆಂಬುದು ಸತ್ಯ.

ಆದರೆ ಇಂದಿನ ಪರಿಸ್ಥಿತಿ ಎಂದರೆ - ಅಹಂಭಾವ ಅಜ್ಞಾನಗಳಿಂದ ಮನುಷ್ಯನೇ ಉಲ್ಲೋಲ ಕಲ್ಲೋಲವನ್ನು ಸೃಷ್ಟಿಸುತ್ತಿದ್ದಾನೆ. ಭಾಷೆ, ಮತ, ಪ್ರಾಂತ್ಯಗಳ ಹೆಸರಿನಲ್ಲಿ ಮಾರಣಹೋಮ ನಡೆಸುತ್ತಿದ್ದಾನೆ. ತನ್ನ ಹಿಂಸೆಗೆ ಗುರಿಯಾಗುವುದು ತನ್ನಂತದೇ ಆದ ಇನ್ನೊಂದು ಪ್ರಾಣಿ - ಮನುಷ್ಯ ಪ್ರಾಣಿ - ಎಂಬುದನ್ನು ಮರೆಯುತ್ತಿದ್ದಾನೆ.

ನಮ್ಮ ಧರ್ಮವನ್ನು, ನಮ್ಮ ಸಂಸ್ಕೃತಿಯನ್ನು, ಈ ಸಂಸ್ಕೃತಿ ಸಂಪ್ರದಾಯಗಳಿಗೆ ತವರು ಮನೆಯಾದ ನಮ್ಮ ಆಲಯಗಳನ್ನು, ಅಲ್ಲಿ ನೆಲೆಸಿರುವ ಆರಾಧ್ಯ ಮೂರ್ತಿಗಳನ್ನು ರಕ್ಷಿಸಿಕೊಳ್ಳುವ ಅಗತ್ಯ, ಜವಾಬ್ದಾರಿ, ನಮ್ಮೆಲ್ಲರ ಮೇಲಿದೆ.. ಪ್ರಪಂಚದಲ್ಲಿಯೇ ಅತ್ಯಂತ ಕೀರ್ತಿಯನ್ನು ಪ್ರಸಿದ್ಧಿಯನ್ನು ಹೊಂದಿದ ತಿರುಮಲೆ ತಿರುಪತಿ ತಿರುಚಾನೂರು ಆಲಯಗಳ ಬಗ್ಗೆ ನಮ್ಮ ಹೊಣೆಗಾರಿಕೆ ಮತ್ತಷ್ಟು ಹೆಚ್ಚು. ಆಲಯ ಪ್ರವೇಶದ ಮೊದಲು ನಮ್ಮ ಎಲ್ಲಾ ವಸ್ತುಗಳನ್ನು ಲಗೇಜ್ ಕೇಂದ್ರಗಳಲ್ಲಿ ಇಟ್ಟು ಬರುವುದು ನಮ್ಮ ಕರ್ತವ್ಯ. ಯಾವುದೇ ವಿಧವಾದ ವಸ್ತುಗಳನ್ನೂ ಜೊತೆಗೆ ತೆಗೆದುಕೊಂಡು ಆಲಯಕ್ಕೆ ಬರುವುದು ಬೇಡ.

ಆಲಯಗಳನ್ನು ಆರಾಧ್ಯಮೂರ್ತಿಗಳನ್ನು ಕಾಪಾಡುವುದು ಆಯುಧಗಳು ಪರಿಕರಗಳು ಅಲ್ಲ. ನಂಬಿದ ದೈವಕ್ಕಾಗಿ ಶಿಸ್ತು, ಜಾಗರೂಕತೆ ಹೊಂದಿರುವುದು ಪ್ರತಿ ಭಕ್ತರ ಮೇಲೂ ಇರುವ ಹೊಣೆಯಾಗಿದೆ.

ತಿರುಚಾನೂರು ಗ್ರಾಮದಲ್ಲಿ ನೆಲೆಸಿರುವ ಜಗದ್ಧಾತ್ರಿ ಅಲಮೇಲು ಮಂಗಮ್ಮನವರಿಗೆ ಈ ಕಾರ್ತೀಕಮಾಸದಲ್ಲಿ ನವಂಬರ್ 12 ರಿಂದ ನವಂಬರ್ 20 ರ ವರೆಗೆ ಅತ್ಯಂತ ವೈಭವದಿಂದ ಬ್ರಹ್ಮೋತ್ಸವಗಳು ನಡೆಯುತ್ತವೆ. ದಯಾಸ್ವರೂಪಿಣಿ ಪುರುಷಕಾರಳು ಆದ ಆ ತಾಯಿಯನ್ನು ಎಲ್ಲರೂ ದರ್ಶಿಸುವುದು ಆಗಬೇಕು.

ಆಲಯ ರಕ್ಷಣೆಗೆ ಸಂಬಂಧಿಸಿದ ವಿಷಯಗಳು ಆಲಯಾಧಿಕಾರಿಗಳ ಸಿಬ್ಬಂದಿಯ ಜವಾಬ್ದಾರಿ ಎಂದುಕೊಳ್ಳದೆ ಪ್ರತಿ ಭಕ್ತರೂ ಪರಿಶೀಲಿಸಬೇಕು. ದೇವಸ್ಥಾನದ ಯಂತ್ರಾಂಗ ಯಾತ್ರಿಕರ ರಕ್ಷಣೆಗೆ ನಡುಕಟ್ಟಿ ನಿಂತಿದೆ. ಭದ್ರತೆಗೆ ಸಂಬಂಧಿಸಿದ ವಿಷಯಗಳಲ್ಲಿ ನಿಷೇಧಗಳನ್ನೆಲ್ಲ ನಿಯಮ ಪೂರ್ವಕವಾಗಿ ಪಾಲಿಸಬೇಕು ಎಂದು ನಮ್ರತೆಯಿಂದ ವಿನಂತಿಸಿಕೊಳ್ಳುತ್ತೇನೆ. ತನಿಖೆ ನಡೆಯುವ ಹೊತ್ತು, ಸ್ವಚ್ಛಂದವಾಗಿ ಸಹಕರಿಸಬೇಕೆಂದು ಕೇಳಿಕೊಳ್ಳುತ್ತೇನೆ. ಅನುಮಾನಿತ ವ್ಯಕ್ತಿಗಳ ಬಗ್ಗೆ ವಸ್ತುಗಳ ಬಗ್ಗೆ ಅಧಿಕಾರಿಗಳಿಗೆ ಸೂಚನೆ ನೀಡಬೇಕೆಂದು ವಿನಂತಿಸಿಕೊಳ್ಳುತ್ತೇನೆ.

ಎಲ್ಲರೂ ತಾಯಿ ಪದ್ಮಾವತಿಯನ್ನು ದರ್ಶಿಸಬೇಕೆಂದೂ, ಆಲಯ ರಕ್ಷಣೆಗೆ ವಚನಬದ್ಧರಾಗಬೇಕೆಂದೂ ಬೇಡುತ್ತ.......


**ಡಾ|| ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.



# ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯ

-(ವಿವಿಧ ಲೇಖಕರಿಂದ)

## ಇತಿಹಾಸದಲ್ಲಿ - ಆಲಯ

ತಿರುನೂರು ಎಂದೂ ಪ್ರಸಿದ್ಧವಾಗಿರುವ ತಿರುಚಾನೂರು ತಿರುಪತಿಯ ದಕ್ಷಿಣದಲ್ಲಿ ಐದು ಮೈಲಿ ದೂರದಲ್ಲಿದೆ. ಈ ಗ್ರಾಮವು ಮೊದಲಿಗೆ ತಿರುಚ್ಚೋಗಿನೂರು, ತಿರುಶುಕನೂರು ಎಂದೂ ಹೆಸರುಗಳನ್ನು ಪಡೆದಿದ್ದಿತು. ಈಚಿನ ಒಂದು ಶಾಸನದಲ್ಲಿ 'ಶ್ರೀ ಶುಕ ಗ್ರಾಮ' ಎಂಬ ಸಂಸ್ಕೃತ ಪ್ರಯೋಗವೂ ಉಂಟು. ತಿರುಚಾನೂರಿನ ಪಶ್ಚಿಮಕ್ಕೆ ಒಂದು ಫರ್ಲಾಂಗ್ ದೂರದಲ್ಲಿ ಜೋಗಿಮಲ್ಲಾವರಂ ಎಂದು ಕರೆಯಲಾಗುತ್ತಿರುವ ತಿರುಚ್ಚೋಗಿನೂರು ಇದೆ. ಹದಿನಾರನೆಯ ಶತಮಾನದಲ್ಲಿ ತಿರುಚಾನೂರನ್ನು ವಾದಿರಾಜಪುರ (ವರದರಾಜಪುರ?) ಎಂದೂ ಕರೆಯಲಾಗುತ್ತಿತ್ತು. ಪಲ್ಲವರಕಾಲದಲ್ಲಿ ಈ ಗ್ರಾಮವು ಇರುವ ಪ್ರದೇಶವನ್ನು ತಿರುವೆಂಗಡಕೋಟ್ಟಂ ನ ಕುಡುವುರು ನಾಡು ಎಂದು ಕರೆಯಲಾಗುತ್ತಿದ್ದರೆ ಚೋಳರ ಕಾಲದಲ್ಲಿ ಈ ಪ್ರಾಂತ್ಯವನ್ನು ರಾಜೇಂದ್ರ ಚೋಳ ಮಂಡಳವೆಂದೂ ಅದಕ್ಕೂ ಮೊದಲು ಜಯಂಗೊಂಡ ಚೋಳ ಮಂಡಳವೆಂದೂ ಗುರುತಿಸಲಾಗುತ್ತಿದ್ದಿತು.

**ಪ್ರಾಧಾನ್ಯ :** ತಿರುಪತಿಯ ಸುತ್ತುಮುತ್ತಲಿನ ಪ್ರದೇಶದ ಇತಿಹಾಸದಲ್ಲಿ - ವಿಶೇಷವಾಗಿ ಇಲ್ಲಿನ ಧಾರ್ಮಿಕ ಚಟುವಟಿಕೆಗಳ ಬೆಳವಣಿಗೆಯ ದೃಷ್ಟ್ಯಾ- ತಿರುಚಾನೂರು ಪ್ರಮುಖ ಪಾತ್ರವಹಿಸುವುದು. ಈ ಪ್ರಾಂತ್ಯವು ಕ್ರಿಸ್ತಶಕದ ಎಂಟನೆಯ ಶತಮಾನದ ಹೊತ್ತಿಗೇ ವೈಷ್ಣವ ಪ್ರಭಾವದಲ್ಲಿ ಬೆಳೆಯಿತು. ಕ್ರಿಸ್ತಶಕ ಒಂಬತ್ತನೆಯ ಶತಮಾನದ ಆರಂಭದಲ್ಲಿಯೇ ಇದೊಂದು ವೈಷ್ಣವರ ಮುಖ್ಯ ಕೇಂದ್ರವಾಗಿದ್ದಿತು. ಆ ಹೊತ್ತಿಗೇ ತಿರುಮಲೆಯೂ ಅಲ್ಲಿನ ಸ್ವಾಮಿಯಾದ ಶ್ರೀ ವೆಂಕಟೇಶ್ವರನೂ ಪ್ರಸಿದ್ಧವಾಗಿದ್ದರೂ ಸಹ ಬೆಟ್ಟದ ಕಾಡಿನ ದುರ್ಗಮತೆಯಿಂದಾಗಿ ಹೆಚ್ಚು ಮಂದಿ ಯಾತ್ರಿಕರು ಬೆಟ್ಟದ ಕಡೆ ಕರ್ಷಿತರಾಗಲಿಲ್ಲ. ತಿರುಚಾನೂರಿನ ವೈಷ್ಣವರು ತಮ್ಮ ನಡುವೆ ಒಂದು ತಿರುಮಂತ್ರಶಾಲೆಯನ್ನು ಏರ್ಪಡಿಸಿಕೊಂಡು ಧಾರ್ಮಿಕ ಚಟುವಟಿಕೆಯಲ್ಲಿ ತೊಡಗಿದ್ದರು. ಇಲ್ಲಿಯೇ ಒಂದು ತಿರುವಿಳಂಕೋಯಿಲನ್ನೂ ನಿರ್ಮಿಸಿ ಅದರಲ್ಲಿ ಬೆಟ್ಟದೊಡೆಯನ ಪ್ರತಿಮೂರ್ತಿಯನ್ನು ಸ್ಥಾಪಿಸಿ, ಪ್ರತಿನಿಧಿ ದೈವವೆಂದು ಪೂಜಿಸುತ್ತಿದ್ದರು. ತಿರುಚಾನೂರು ಬೆಟ್ಟಗಳ ನಡುವೆಯಿದ್ದರೂ ಬಯಲಿನಲ್ಲಿದ್ದುದರಿಂದಲೂ ಬಹುಮಂದಿ ಯಾತ್ರಿಕರು ತಿರುಮಲೆಯ ದೇವರಿಗೆ ನಡೆದುಕೊಳ್ಳುವಂತೆಯೇ ಈ ದೇವರನ್ನೂ ಭಕ್ತಿ ಶ್ರದ್ಧೆಗಳಿಂದ ಪೂಜಿಸತೊಡಗಿದರು. ಚೋಳರು ಒಂಬತ್ತನೆಯ ಶತಮಾನದ ಕೊನೆಯಲ್ಲಿ ತಿರುಪತಿ - ತಿರುಚಾನೂರು ಸೀಮೆಯನ್ನು ವಶಪಡಿಸಿಕೊಂಡರು. ಅವರು ಶೈವರಾಗಿದ್ದುದರಿಂದ ಈ ಮೊದಲು ವೈಷ್ಣವ ಪಾರಮ್ಯವಿದ್ದ



ತಿರುಚಾನೂರು ಶೈವ ಪ್ರಭಾವದಲ್ಲಿ ಬೆಳೆಯತೊಡಗಿತು. ಗ್ರಾಮದ ಪಶ್ಚಿಮ ಭಾಗದಲ್ಲಿ ಶಿವನ ಒಂದು ಗುಡಿಯನ್ನು ಪರಾಶರೇಶ್ವರನ (ಶುಕ ಮುನಿಯ ತಂದೆ ವೇದವ್ಯಾಸರು - ವ್ಯಾಸರ ತಂದೆ ಪರಾಶರರು. ಶುಕನ ಊರು ಜೋಗಿಮಲ್ಲವರ ವಾಯಿತು.) ಹೆಸರಿನಲ್ಲಿ ನಿರ್ಮಿಸಲಾಯಿತು. ಇದು ತತ್ಕಾಲದಲ್ಲಿಯೇ ಪ್ರಸಿದ್ಧವಾಯಿತು. ಹದಿಮೂರನೆಯ ಶತಮಾನದಲ್ಲಿ ಚೋಳರ ಅವನತಿಯಿಂದಾಗಿ ಸ್ಥಳೀಯ ಪಾಳಯಗಾರರು ಪ್ರಬಲರಾಗಿ ಬೆಳೆದರು. ಇವರಲ್ಲಿ ಯಾದವರಾಯರು ವೈಷ್ಣವ ಧರ್ಮದ ತೀವ್ರ ಭಕ್ತಿಯ ಆಶ್ರಯದಾತರಾಗಿದ್ದರು. ಇವರ ಪ್ರಾಬಲ್ಯದ ಕಾಲದಲ್ಲಿ ತಿರುಚಾನೂರಿನಲ್ಲಿ ಒಂದು ಅಳಗಿಯ ಪೆರುಮಾಳ್ ಅಥವಾ ಕೃಷ್ಣಸ್ವಾಮಿಯ ಕೋಯಿಲು ನಿರ್ಮಾಣ ವಾಯಿತು. ವಿಜಯನಗರದ ಕಾಲದಲ್ಲಿ ವೈಷ್ಣವಧರ್ಮ ಅತಿ ಹೆಚ್ಚಿನ ಪ್ರಾಧಾನ್ಯ ಪಡೆಯಿತು. ಹದಿನಾರನೆಯ ಶತಮಾನದಲ್ಲಿ ತಿರುಚಾನೂರಿನಲ್ಲಿ ಒಂದು ವರದರಾಜಸ್ವಾಮಿ ಆಲಯ ನಿರ್ಮಾಣವಾಯಿತು.

ತಿರುಚಾನೂರು ತನ್ನ ಐದು ಆಲಯಗಳಿಂದಾಗಿ ಪ್ರಸಿದ್ಧವಾಗಿದ್ದು ಅವುಗಳಲ್ಲಿ ನಾಲ್ಕು ಇಂದೂ ಕಾಣತಕ್ಕವಾಗಿವೆ. ಇವುಗಳೆಂದರೆ - ತಿರುವಿಳಂಕೋಯಿಲ್, ಕೃಷ್ಣದೇವಾಲಯ, ಪರಾಶರೇಶ್ವರ ಆಲಯ, ವರದರಾಜ ಗುಡಿ ಹಾಗೂ ಪದ್ಮಾವತೀ ಆಲಯ.

## ಶ್ರೀ ಪದ್ಮಾವತೀ ಅಮ್ಮನವರ ಆಲಯ :

ಅಳಗಿಯ ಪೆರುಮಾಳ್ ಆಲಯದ ಉತ್ತರ ಭಾಗದಲ್ಲಿರುವ ಈ ದೇವಾಲಯವು ತಿರುಚಾನೂರಿಗೆ ಹೊರಡುವ ಯಾತ್ರಿಕರ ಪ್ರಧಾನ ಆಕರ್ಷಣೆಯಾಗಿರುತ್ತದೆ. ಈ ಆಲಯದ ಗರ್ಭಗುಡಿಯಲ್ಲಿರುವ ಶ್ರೀ ಪದ್ಮಾವತೀ ದೇವಿಯನ್ನು ಶ್ರೀ ವೆಂಕಟೇಶ್ವರಸ್ವಾಮಿಯ ಪತ್ನಿಯೆಂದು ಪುರಾಣೇತಿಹಾಸಗಳು ವರ್ಣಿಸುತ್ತವೆ. ಈಕೆಯನ್ನೆ ತಪ್ಪಾಗಿ ಅಲರ್ ಮೇಲ್ ಮಂಗೈ ನಾಚ್ಚಿಯಾರ್ ಎಂದೂ ಗುರುತಿಸಲಾಗಿದೆ. ತಿರುಮಲೆಯಲ್ಲಿ ದೊರೆಯುವಂತಹ ಅಸಂಖ್ಯಾಕ ವಾದ ಶಾಸನಗಳು ಶ್ರೀ ವೆಂಕಟೇಶ್ವರಸ್ವಾಮಿಯ ವಕ್ಷಃಸ್ಥಲದಲ್ಲಿ ಬಲಭಾಗದಲ್ಲಿರುವುದು ಅಲರ್ ಮೇಲ್ ಮಂಗೈ ನಾಚ್ಚಿಯಾರ್ ಎಂದು ಹೇಳುತ್ತವೆ. ತಿರುಮಲೆ, ತಿರುಪತಿ, ತಿರುಚಾನೂರು, ಜೋಗಿ ಮಲ್ಲಾವರಗಳಲ್ಲಿ ಕಂಡುಬರುವ ಸಾವಿರಕ್ಕೂ ಹೆಚ್ಚಿನ ಶಾಸನಗಳಲ್ಲಿ ಒಂದೂ ಸಹ ಶ್ರೀ ಪದ್ಮಾವತಿಯೆಂಬ ದೇವತೆಯ ಹೆಸರನ್ನು ಹೇಳುವುದಿಲ್ಲ. ಅರ್ವಾಚೀನವಾದ ಕಾಲಸೂಚನೆಯಿಲ್ಲದ ದಾಖಲೆಯೊಂದು ಪದ್ಮತೀರ್ಥ ಹಾಗೂ ಶ್ರೀ ಶುಕಗ್ರಾಮಗಳನ್ನು ಹೆಸರಿಸಿದರೂ ಪದ್ಮಾವತೀ ದೇವಿಯನ್ನು ಹೆಸರಿಸದು. ಆಲಯದ ವಾಸ್ತುಶಿಲ್ಪವು ತುಂಬ ಈಚಿನ ಕಾಲವನ್ನೇ ಸೂಚಿಸುತ್ತದೆ. ಈ ಭಾಗದಲ್ಲಿ ದೊರೆಯುವ ಶಾಸನಗಳು ಕ್ರಿ.ಶ. 17 ನೇ ಶತಮಾನದ ಮೊದಲ ಕಾಲುಭಾಗದ ಹೊತ್ತಿಗೆ ಬರುವಷ್ಟರಲ್ಲಿ ನಿಂತು ಹೋಗುತ್ತವೆ. ಹಾಗಾಗಿ ಆ ಶತಮಾನದ ಕೊನೆಯ ಹೊತ್ತಿಗೆ ಈ ಆಲಯ ವುಂಟಾಗಿರಬೇಕೆಂದು ಸ್ವೀಕರಿಸಬಹುದು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯವನ್ನು ಈ ದೇವಾಲಯವು ಹಲವು ವಿಧದಲ್ಲಿ ಹೋಲುತ್ತದೆ. ಒಂದು ಗರ್ಭಗೃಹವನ್ನೂ ಅದರ ಸುತ್ತಲೂ ಕಂಬಗಳಿಂದ ಕೂಡಿದ ಮೂರು ಕಡೆಯ ಅಂತರಾಳವೂ, ನಾಲ್ಕನೆಕಡೆಯ ಮುಖ ಮಂಟಪವನ್ನೂ ಹೊಂದಿದೆ. ಇದರಾಚೆಗೆ ಕಂಬಗಳ ಒಂದು ಮಧ್ಯ ಮಂಟಪವೂ ಅದರಿಂದಾಚೆಗೆ ಸ್ವಲ್ಪ ತಗ್ಗಿನಲ್ಲಿರುವ ಕಂಬಗಳಿಂದ ಕೂಡಿದ ಮೂರೂ ಕಡೆ ತೆರೆದುಕೊಂಡಿರುವ ಹೊರ ಮಂಟಪವೂ ಇದೆ. ಇದರಾಚೆಗೆ ಪೂರ್ವದಲ್ಲಿ ಕಲ್ಯಾಣಮಂಟಪವೂ ಅದರ ಮಧ್ಯದಲ್ಲಿ ಒಂದು ಕಿರಿಯ ಗುಡಿಯೂ ಇದೆ. ಹಿಂದಿನ ಮಂಟಪದ ಗೋಡೆಯ ಕಲ್ಲುಗಳು ದೊಡ್ಡದಾಗಿದ್ದು ಒಂದಕ್ಕೊಂದು ಒಳಸೇರಿಸಿದಂತೆ ಆಗಿದೆ. ಮೇಲೆ ತಗ್ಗಿದ ಕಾರ್ನಿಸುಗಳಿವೆಯಾದರೂ ಅಲಂಕಾರಗಳೇನಿಲ್ಲ. ಮೇಲ್ಚಾವಣಿಯು ಸಾಧಾರಣವಾಗಿದೆ. ಗರ್ಭಗೃಹದ ಮೇಲಿನ ವಿಮಾನವು ಒಂದು ಅಂತಸ್ತಿನದಾಗಿದ್ದು ಕೂಟ, ಸಾಲ ಹಾಗೂ ಕೂಟದಿಂದ ಕೂಡಿದೆ. ಮೇಲೆ ಗ್ರೀವವಿದ್ದು ನಾಲ್ಕೂ ಕಡೆಗೆ ನಾಲ್ಕು ಸಿಂಹಗಳಿವೆ. ಶಿಖರವು ವೃತ್ತಾಕಾರವಾಗಿದ್ದು ಸಿಂಹಲಲಾಟದಿಂದ ಕೂಡಿದೆ. ಮೇಲೊಂದು ಕಮಲವಿದ್ದು ಅದರೊಳಗೆ ಬಂಗಾರದ ಗಿಲೀಟಿನ ಕಳಸವಿದೆ.

ಮುಂದುಗಡೆಯ ತೆರೆದ ಮಂಟಪದಲ್ಲಿ ಆರು ಕಂಭಗಳ ಆರುಸಾಲುಗಳಿವೆ. ಎಲ್ಲವೂ ವಿಜಯನಗರದ ಮಾದರಿಯವುಗಳು. ಹೊರಗಡೆಯ ಎರಡು ಕಂಭ ಸಾಲಿನ ನಡುವೆ ಚಿನ್ನದ ಗಿಲೀಟಿನ ತಾಮ್ರ ಹೊದಿಸಿದ ಧ್ವಜಸ್ತಂಭ ಹಾಗೂ ಬಲಿಪೀಠಗಳಿವೆ. ಇದರಾಚೆಗೆ ಎತ್ತರದ ಜಗಲಿಯಿದ್ದು ಇದರ ಪಾರ್ಶ್ವಗಳಲ್ಲಿ ಗೋಡೆಗಳಿದ್ದು ಮುಂಭಾಗದಲ್ಲಿ ಮರದ ದಾಲಮಂದ್ರದಲ್ಲಿ ಕಬ್ಬಿಣದ ಸರಳುಗಳನ್ನು ಕೂಡಿಸಿದೆ. ಈ ಅಂಗಳದಲ್ಲಿ ನಾಲ್ಕು ಕಂಭಗಳ ಎರಡು ಸಾಲು ಇದ್ದು ಇವೆಲ್ಲ ಚೋಳರ ಶೈಲಿಯಲ್ಲಿವೆ. ನಾಲ್ಕು ಕೇಂದ್ರಸ್ತಂಭಗಳ ನಡುವೆ ಎತ್ತರದ ಚೌಕಾಕಾರದ ಜಗತಿಯಿದೆ. ಇದರಾಚೆಗೆ ಮುಖಮಂಟಪವಿದ್ದು ಎರಡೂ ಕಡೆಗೆ ಒಂದೊಂದು ಗುಡಿಯಿದೆ. ಉತ್ತರದ ಗುಡಿಯಲ್ಲಿ ರಾಮಾನುಜರ ಸನ್ನಿಧಿಯಿದ್ದರೆ ದಕ್ಷಿಣದ ಗುಡಿಯಲ್ಲಿ ಗರುಡ ವಿಷ್ವಕ್ಸೇನರಿದ್ದಾರೆ. ಮುಖಮಂಟಪದ ಒಳಗೆ ಅಂತರಾಳ, ಗರ್ಭಗುಡಿಗಳಿವೆ. ಇದರ ದಕ್ಷಿಣದಲ್ಲಿ, ಪಶ್ಚಿಮದಲ್ಲಿ ಹಾಗೂ ಉತ್ತರದಲ್ಲಿ ಕಂಭಗಳ ಒಂದು ಅಂಗಳವುಂಟು. ತಿರುಪತಿಯ ಗೋವಿಂದರಾಜ ಸ್ವಾಮಿ ಆಲಯದಂತೆಯೇ ಇಲ್ಲಿನ ಕಟ್ಟಡ ವಿನ್ಯಾಸ. ಒಂದು ಸಣ್ಣದಾದ ಆವರಣಗೋಡೆ ಈ ಎಲ್ಲ ಕಂಭಗಳನ್ನು ಸೇರಿಸುತ್ತದೆ. ಹೆಚ್ಚಿನ ಕಂಭಗಳು ಚೋಳರ ಕಾಲದವಾಗಿದ್ದು ಜೀರ್ಣವಾಗುತ್ತಿರುವ ಕಪೋತಗಳನ್ನು ಹೊಂದಿದ್ದರೆ ಹಲವು ಕಂಭಗಳು ವಿಜಯನಗರದ ಶೈಲಿಯವು. ಅಂಗಳಕ್ಕೂ ಗರ್ಭಗೃಹಕ್ಕೂ ನಡುವೆ ಸುಮಾರು ಮೂರು ಅಡಿಯ ಸ್ಥಳವಿದ್ದು ಇದು ಮೊದಲಿಗೆ ತೆರೆದುಕೊಂಡಿದ್ದು ನಂತರ ಛಾವಣಿಯವರೆಗೆ ಎತ್ತರಿಸಿದ ಕಲ್ಲು ಚಪ್ಪಡಿಗಳಿಂದ ಎರಡೂ ಕಟ್ಟಡಗಳ ಮೇಲಿನವರೆಗೆ ಮುಚ್ಚಲಾಗಿರಬೇಕು.

ಗರ್ಭಗೃಹದ ಹೊರಭಾಗವು ಮೂರು ಪಿಲಾಸ್ತರು - ಸಾಲಕೋಷ್ಠ - ಮೂರು

ಪಿಲಾಸ್ತರುಗಳಿಂದ ಅಲಂಕೃತಗೊಂಡಿದೆ. ಅಂತರಾಳದ ಗೋಡೆಗಳಲ್ಲಿ ಎರಡು ಪಿಲಾಸ್ತರು - ಸಾಲಕೋಷ್ಠ - ಎರಡು ಪಿಲಾಸ್ತರುಗಳ ಸಾಲಿನಿಂದ ಕೂಡಿದ ಅಲಂಕಾರವಿದೆ. ಮೇಲಿನ ಕಪೋತಗಳು ಸಿಂಹಲಲಾಟಗಳ ಮೇಲಿನ ನಾಸಿಕಗಳಿಂದ ಕೂಡಿವೆ. ಮುಂದಿನ ಗೋಡೆ ಹಾಗೂ ಅಂಗಳದ ಮಧ್ಯದ ಸ್ಥಳವನ್ನು ಎರಡೂ ಕಡೆ ಕಿರಿಯ ಒಂದು ಗೋಡೆಯಿಂದ ತುಂಬಿಸಿದ್ದು ಇಲ್ಲಿ ಇಬ್ಬರು ದ್ವಾರಪಾಲಕರ ಪ್ರತಿಮೆಗಳಿವೆ. ಗರ್ಭಗೃಹದಲ್ಲಿ ಶ್ರೀಪದ್ಮಾವತೀ ದೇವಿಯ ವಿಗ್ರಹ ಪದ್ಮಾಸನದಲ್ಲಿ ಕಳಿತಂತಿದೆ. ಮೇಲಿನ ಎರಡೂ ಕೈಗಳಲ್ಲಿ ಕಮಲದ ಹೂವುಗಳಿವೆ. ಕೆಳಗಿನ ಎರಡು ಹಸ್ತಗಳು ಅಭಯ ವರದ ಮುದ್ರೆಗಳಲ್ಲಿವೆ.

– ಡಾ|| ಎಂ. ರಾಮರಾವ್.

## ತಿರುಚಾನೂರು ಬ್ರಹ್ಮೋತ್ಸವ

ತಿರುಚಾನೂರು ಅಮ್ಮನವರ ಪ್ರಸನ್ನವೂ ಅನುಗ್ರಹ ಪೂರ್ಣವೂ ಆದ ಸನ್ನಿಧಿ ತಿರುಚಾನೂರನ್ನು ಸಂದರ್ಶಿಸುವ ಯಾತ್ರಿಕರಿಗೆ ಒಂದು ದಿವ್ಯವಾದ ಅನುಭವವನ್ನುಂಟುಮಾಡಿ, ಭಕ್ತ ಯಾತ್ರಿಕರ (ಆತನ - ಆಕೆಯ) ಇರುವಿಕೆಯನ್ನು ಧನ್ಯವಾಗಿಸುತ್ತದೆ. ಆಕೆಯ ಅನುಪಮವಾದ ವಾತ್ಸಲ್ಯಪೂರ್ಣದೃಷ್ಟಿಯಿಂದ ಭಕ್ತರು ಅಯಸ್ಕಾಂತದಿಂದ ಆಕರ್ಷಿತವಾದ ಲೋಹದಂತೆ - ಹಸುವಿನತ್ತ ಆಕರ್ಷಿತವಾಗುವ ಕರುವಿನಂತೆ ಧಾವಿಸಿ ಮುಂದೆ ಬರುತ್ತಾರೆ.

ಇಲ್ಲಿ ತೆಪ್ಪೋತ್ಸವ ಬ್ರಹ್ಮೋತ್ಸವಗಳನ್ನು ಬಹು ವೈಭವದಿಂದ ಆಚರಿಸಲಾಗುತ್ತದೆ. ಅಮ್ಮನವರನ್ನು ಪದ್ಮಸರೋವರದಲ್ಲಿನ ಅಲಂಕೃತ ತೆಪ್ಪದಲ್ಲಿ ಆಸೀನಗೊಳಿಸಿ ಜೂನ್ - ಜುಲೈ ತಿಂಗಳುಗಳಲ್ಲಿ ಮೂರು ದಿನಗಳ ಕಾಲ ಉತ್ಸವ ಮಾಡಲಾಗುತ್ತದೆ. ತೆಪ್ಪೋತ್ಸವದ ಕಾಲದಲ್ಲಿ ಅಲಂಕೃತವಾದ ವಿದ್ಯುದ್ದೀಪಗಳ ಕಾಂತಿಯ ನಡುವೆ ವಿವಿಧ ರೀತಿಯ ಆಭರಣಗಳಿಂದ ಅಲಂಕಾರವಾದ ರೀತಿಯಲ್ಲಿ ದೂರಕ್ಕೂ ಕಾಂತಿ ಬೀರುವಂತೆ ತನ್ನ ಕರುಣಾವರ್ಷವನ್ನು ಹರಿಸುವಂತಹ ಅಮ್ಮನವರ ತೆಪ್ಪೋತ್ಸವವನ್ನು ನೋಡಲು ಸುತ್ತಮುತ್ತಲ ಗ್ರಾಮಗಳಿಂದಲೂ, ದೂರದ ಊರುಗಳಿಂದಲೂ, ಜನ ತಂಡೋಪತಂಡವಾಗಿ ತಿರುಚಾನೂರಿನತ್ತ ಆಗಮಿಸುತ್ತಾರೆ.

ತಿರುಚಾನೂರಿನಲ್ಲಿ ಅತ್ಯಂತ ವೈಭವದಿಂದ ನಡೆಯುವ ಉತ್ಸವವೆಂದರೆ ಬ್ರಹ್ಮೋತ್ಸವ. ಭಕ್ತರು ತಮ್ಮ ಹೃದಯ ತುಂಬುವಂತೆ, ಆತ್ಮ ತೃಪ್ತವಾಗುವಂತೆ, ಅಮ್ಮನವರನ್ನು ಆರಾಧಿಸಲು ಅವಕಾಶ ಮಾಡಿಕೊಡುವ ಉತ್ಸವವಿದು. ಕಾರ್ತೀಕ ಮಾಸದಲ್ಲಿ ನವಂಬರ್ - ಡಿಸೆಂಬರ್‌ಗಳಲ್ಲಿ ಧ್ವಜಾರೋಹಣದಿಂದ ಧ್ವಜಾವರೋಹಣದ ವರೆಗೆ ಹತ್ತು ದಿನ ನಡೆಯುವ ಸಡಗರದ ಉತ್ಸವ. ಪಾಂಚರಾತ್ರ ಆಗಮದ ಪ್ರಕಾರ ನಡೆಯುತ್ತದೆ. ಗಜವಾಹನದಲ್ಲಿ ಅಮ್ಮನವರು ಆರನೆಯ ದಿನ ಹೊರಬಂದಾಗ ಲಕ್ಷ್ಮಿಯ ಕಟಾಕ್ಷ ತಾನಾಗಿಯೇ ಭಕ್ತರ ಮನದವರೆಗೆ ಹರಿಯುತ್ತದೆ. ಹಾಗೆಯೇ ನಂತರದ ದಿನದ ಗರುಡೋತ್ಸವ. ಅಲ್ಲಿಂದೆರಡು ದಿನಕ್ಕೆ ರಥೋತ್ಸವ ವೈಭವದಿಂದ ನಡೆಯುತ್ತದೆ. ಎಲ್ಲಕಡೆಯೂ ರಥೋತ್ಸವವೇ ಬ್ರಹ್ಮೋತ್ಸವದ ಮುಗಿತಾಯದ ಸಂಕೇತ. ಆದರೆ ತಿರುಚಾನೂರಿನಲ್ಲಿ ಚಕ್ರಸ್ನಾನವೇ ಅತ್ಯುಚ್ಚಘಟ್ಟ. ಕಾರ್ತೀಕ ಮಾಸದ ಶುದ್ಧ ಪಂಚಮಿಯಂದು ನಡೆಯುವ ಚಕ್ರಸ್ನಾನ ಮುಖ್ಯವಾಗಲು ಕಾರಣ ಅಲರ ಮೇಲಿನ ಮಂಗೈ - ಅಲಮೇಲು ಮಂಗಮ್ಮ - ತಾಯಿ ಪದ್ಮಾವತಿ - ಕಮಲ ಸರೋವರದಲ್ಲಿ ಆವಿರ್ಭವಿಸಿದ ದಿನವಾಗಿ ಅತ್ಯಂತ ಪವಿತ್ರವಾದದ್ದಾಗಿ ಅತ್ಯಂತ ಆಸಕ್ತಿಯಿಂದಲೂ, ಅಭಿಮಾನ ಭಕ್ತಿಶ್ರದ್ಧೆಗಳಿಂದ ಆಚರಿಸಲ್ಪಡುತ್ತದೆ.

ಪಂಚಮಿಯ ಹಿಂದಿನ ದಿನದಂದು (ಚೌತಿ) ತಿರುಮಲೆಯಲ್ಲಿ ಸ್ವಾಮಿಗೆ ಅದ್ದೂರಿಯಾಗಿ ಪೂಜೆಯನ್ನು ದೊಡ್ಡ ಪ್ರಮಾಣದಲ್ಲಿ ಏರ್ಪಡಿಸಲಾಗುವುದು. ಹರಿದ್ರಾಕುಂಕುಮ, ತುಳಸಿಮಾಲೆ, ಮತ್ತಿತರ ಮಂಗಳ ದ್ರವ್ಯಗಳನ್ನೂ, ರೇಷ್ಮೆ ವಸ್ತ್ರಗಳನ್ನೂ ಸ್ವಾಮಿಯ ಸನ್ನಿಧಿಯಿಂದ ತಿರುಮಲೆಯಲ್ಲಿ ಮೆರವಣಿಗೆ ಮಾಡಿ ಗಜರಾಜನ ಮೇಲೆ ಹೊರಿಸಿ ತಿರುಪತಿಗೆ ತರಲಾಗುತ್ತದೆ. ತಿರುಪತಿಯ ಪ್ರಮುಖ ಬೀದಿಗಳಲ್ಲಿ ಮೆರವಣಿಗೆಯನ್ನು ಮಾಡಿದ ನಂತರ ತಿರುಚಾನೂರಿಗೆ ತರಲಾಗುವುದು. ಊರ ಹೊರಗೆ - ಪುರದ್ವಾರದಲ್ಲಿ ಸ್ವಾಮಿ ಸನ್ನಿಧಿಯಿಂದ ಬಂದಂತಹ ಈ ಮಂಗಳ ದ್ರವ್ಯ, ನೂತನ ರೇಷ್ಮೆ ವಸ್ತ್ರಗಳನ್ನು ಸ್ವಾಗತಿಸಿ ಊರ ಮೆರವಣಿಗೆಯಲ್ಲಿ ಪದ್ಮಸರೋವರದ ಬಳಿ



ಕಾಯುತ್ತ ಇರುವ - ಪಲ್ಲಕ್ಕಿಯಲ್ಲಿ ಈ ಮೊದಲೇ ಮೆರವಣಿಗೆಯಲ್ಲಿ ಊರ ಬೀದಿಗಳಲ್ಲಿ ಜನರನ್ನು ಅನುಗ್ರಹಿಸಿ ಬಂದಿರುವಂತಹ - ಶ್ರೀ ಪದ್ಮಾವತೀ ಅಮ್ಮನವರಿಗೆ ಸಮರ್ಪಿಸಲಾಗುತ್ತದೆ. ಪದ್ಮ ಸರೋವರದ ಸ್ನಪನ ಮಂಟಪದಲ್ಲಿ ತಿರುಮಂಜನ ವಾದ ಮೇಲೆ ಪದ್ಮಸರೋವರದಲ್ಲಿ ಚಕ್ರಸ್ನಾನ ಸಂಪನ್ನವಾಗುತ್ತದೆ. ಚಕ್ರಸ್ನಾನದ ಸಮಯದಲ್ಲಿ ಸಾವಿರಾರು ಮಂದಿ ಸರೋವರದ ಪೂತ ಜಲಾಭಿಷೇಚನದಿಂದ ಸಂತುಷ್ಟರಾಗುತ್ತಾರೆ.

ಅಂದು ಸಂಜೆ ವೈಭವದ ಆಸ್ಥಾನವನ್ನು ನಡೆಸಲಾಗುತ್ತದೆ. ನಂತರ ಊರ ಮೆರವಣಿಗೆಯಾಗಿ ಅಮ್ಮನವರು ಸಕಲರನ್ನೂ ಅನುಗ್ರಹಿಸಿ ಆಲಯಕ್ಕೆ ಹಿಂದಿರುಗಿದ ಮೇಲೆ ಧ್ವಜಾವರೋಹಣವಾಗುತ್ತದೆ.

**- ವಿ. ಶ್ರೀಶನ್.**

## ಮಹಂತರು - ತಿರುಚಾನೂರು

ತಿರುಚಾನೂರಿನ ಇತಿಹಾಸದಲ್ಲಿ ಮಹಂತರು ಅರ್ವಾಚೀನರೇ ಆದರೂ ಅವರು ಇಲ್ಲಿ ಮಠವನ್ನು ಸ್ಥಾಪಿಸಿಕೊಂಡು ಇರಲಿಕ್ಕೆ ಆರಂಭಿಸಿದ ಮೇಲೆ ಇಲ್ಲಿನ ಹಲವು ಹನ್ನೊಂದು ಗುಡಿಗಳ ಜೀರ್ಣೋದ್ಧಾರ ನಿತ್ಯಪೂಜೆ ನೈವೇದ್ಯಗಳಲ್ಲಿ ಬಹು ಆಸಕ್ತಿಯಿಂದ ಪಾಲುಗೊಂಡರು. ಆಂಗ್ಲರು ತಮ್ಮ ನೇರ ಆಡಳಿತದ ವೆಂಕಟೇಶ್ವರಸ್ವಾಮಿಯ ಆಲಯದ ಆಡಳಿತವನ್ನು ದೇಶೀಯರಿಗೆ ಒಪ್ಪಿಸುವ ಇರಾದೆಯನ್ನು ಹೊಂದಿದಾಗ ಅವರು ಈ ಜವಾಬ್ದಾರಿಯನ್ನು ಸ್ವೀಕರಿಸಬಲ್ಲ ಸ್ಥಳೀಯರನ್ನು ವಿಚಾರಿಸಿ ನೋಡಿದರು. ಅವರಿಗೆ ಇಲ್ಲಿದ್ದ ಮಹಂತರ ಬಗ್ಗೆ ವಿಶ್ವಾಸವುಂಟಾಗಿ ಮಹಂತರಿಗೆ 1843 ರಲ್ಲಿ ಒಂದು ಮುಚ್ಚಳಿಕೆಯನ್ನು ಬರೆದುಕೊಟ್ಟು ಆಡಳಿತವನ್ನು ಒಪ್ಪಿಸಿದರು. ಆಗ ಬೆಟ್ಟದ ಮೇಲಿನ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಅಧಿಕಾರ ದೊಡನೆಯೇ ತಿರುಪತಿಯ ಶ್ರೀಗೋವಿಂದರಾಜ ಸ್ವಾಮಿ ಆಲಯ, ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ಆಲಯಗಳೂ, ಜೊತೆಗೇ ಹಲವಾರು ಸಣ್ಣ ಸಣ್ಣ ಆಲಯಗಳೂ ಮಹಂತರ ಆಡಳಿತದ ಪರಿಧಿಯಲ್ಲಿ ಬಂದು ಸೇರಿದವು. 1933 ರಲ್ಲಿ ಧರ್ಮಕರ್ತರ ಮಂಡಳಿಯ ಅಧೀನಕ್ಕೆ ಬರುವವರೆಗೆ ಈ ಎಲ್ಲ ಆಲಯಗಳ ನಿತ್ಯಪೂಜೆ, ದುರಸ್ತಿ, ಹಬ್ಬ ಹರಿದಿನಗಳು - ಎಲ್ಲದರ ಜವಾಬ್ದಾರಿಯನ್ನೂ ಮಹಂತರು ವಹಿಸಿ ಕೊಂಡಿದ್ದರು. ಅವರು ಆರುಮಂದಿ ಗುರುಶಿಷ್ಯ ಪರಂಪರೆಯಲ್ಲಿ ಬಂದವರು. ''ಸಾಮಾನ್ಯವಾಗಿ ಹೇಳುವುದಾದರೆ ತಿರುಮಲೆಯ ಆಲಯದ ಆಡಳಿತ ಮಹಂತರಿಂದ ತೃಪ್ತಿಕರವಾಗಿಯೇ ನಡೆಯಿತು. ಆಲಯಗಳ ದುರಸ್ತಿ, ಜೀರ್ಣೋದ್ಧಾರ ಕಾರ್ಯಗಳೂ, ಗಮನಾರ್ಹ ವಾದ ಅಭಿವೃದ್ಧಿಯನ್ನು ಸೂಚಿಸಿತು. ಯಾತ್ರಿಕರ ಸೌಲಭ್ಯಗಳು ಹೆಚ್ಚಿದವು''. ಗೋಪಾಲಾ ಚಾರ್ಲು ವರದಿಯು ಈ ಆರು ಮಂದಿಯ ಸೇವೆಗಳನ್ನೂ ಗುರುತಿಸುತ್ತದೆ ಯಾಗಿ, ಆರೂ ಮಂದಿಯೂ ತಿರುಚಾನೂರು ಪದ್ಮಾವತೀ ಅಮ್ಮನವರ ಆಲಯಕ್ಕೆ ನಡೆದುಕೊಂಡ ಪರಿಯನ್ನು ಪರಿಶೀಲಿಸುವುದು ಸುಲಭ.

ಮೊದಲನೆಯ ಮಹಂತ ಸೇವಾದಾಸನು ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ಹಸ್ತಕವಚಗಳನ್ನು ಬೆಳ್ಳಿಯ ಮುಲಾಮಿನಲ್ಲಿ ಶೋಭಿಸುವಂತೆ ಮಾಡಿದನು. ಆಲಯದ ಮುಖ ಮಂಟಪವನ್ನು ನಿರ್ಮಿಸಿದನು. ಎರಡನೆಯ ಮಹಂತ ಧರ್ಮದಾಸನು ತಿರುಚಾನೂರು ಆಲಯದಲ್ಲಿ ಎತ್ತರವಾದ ಪ್ರಾಕಾರವನ್ನು ನಿರ್ಮಿಸಿ ಶ್ರೀ ಪದ್ಮಾವತೀ ಅಮ್ಮನವರ ವಿಮಾನಗೋಪುರ ನಿರ್ಮಿಸಿದ. 1864 ರಿಂದ 1880 ರವರೆಗೆ ವಿಚಾರಣಕರ್ತನಾಗಿದ್ದ ಈತ ತಿರುಚಾನೂರಿನ ಪದ್ಮಸರೋವರವನ್ನು ಆಳಗೊಳಿಸಿ ಮೆಟ್ಟಿಲು ಕಟ್ಟಿಸಿದನು. ಅಲ್ಲಿನ ಉದ್ಯಾನವನದಲ್ಲಿ ಶುಕ್ರವಾರ ಪೂಜೆಗೆ ಕೊಳದೊಂದಿಗೆ ಮಂಟಪ ನಿರ್ಮಿಸಿದನು. ಶ್ರೀ ಪದ್ಮಾವತೀ ಅಮ್ಮನವರ ಗರ್ಭಗೃಹದ ಜೀರ್ಣೋದ್ಧಾರ ಮಾಡಿಸಿದನು. ಆಕೆಗೆ ವಜ್ರಖಚಿತ ಕಿರೀಟವನ್ನೂ ಇತರ ಆಭರಣಗಳನ್ನೂ ಮಾಡಿಸಿದನು. ಹಸ್ತಗಳಿಗೆ ಬಂಗಾರದ ಕವಚಗಳನ್ನೂ ಬಂಗಾರದ ಕಮಲಗಳನ್ನೂ ಮಾಡಿಸಿದನು. ಅಮ್ಮನವರ ಮೆರವಣಿಗೆಗೆ ಹೊಸರಥವನ್ನು ಮಾಡಿಸಿ, ಆಲಯದ ಪಶ್ಚಿಮ ಭಾಗದಲ್ಲಿ ಅಡುಗೆ ಮನೆಯನ್ನೂ, ವಾಹನ ಮಂಟಪಗಳನ್ನೂ ನಿರ್ಮಿಸಿದನು. ಪದ್ಮ ಸರೋವರದ ಎದುರಿನ ಸೂರ್ಯನಾರಾಯಣಸ್ವಾಮಿಯ ಆಲಯವೂ ಜೀರ್ಣೋದ್ಧಾರವಾಯಿತು. ಮೂರನೆಯ ಮಹಂತ ಭಗವಾನ್ ದಾಸನು (1880 - 1890) ತಿರುಚಾನೂರು ಆಲಯದ ಧ್ವಜಸ್ತಂಭದ ಸುತ್ತಲೂ ಮಂಟಪವನ್ನು ನಿರ್ಮಿಸಿ, ಶ್ರೀ ಸುಂದರರಾಜಸ್ವಾಮಿ ಆಲಯವನ್ನು ನಿರ್ಮಿಸಿದ. ಪದ್ಮಸರೋವರದಲ್ಲಿ ನೀರಾಳಿ ಮಂಟಪ ನಿರ್ಮಿಸಿದ. ಇದರ ವಿಮಾನಕ್ಕೆ ಚಿನ್ನದ ಗಿಲೀಟಿನ ಕಳಶವನ್ನಿಡಿಸಿದನು. ಇಲ್ಲಿ ತೆಪ್ಪೋತ್ಸವವನ್ನು ವೈಭವದಿಂದ ನಡೆಸ ಲಾರಂಭಿಸಿದನು. ನಾಲ್ಕನೆಯ ವಿಚಾರಣಕರ್ತ ಮಹಾಬೀರದಾಸ ಯಾವುದೇ ಪ್ರಮುಖ ಕೆಲಸಗಳನ್ನೂ ಕೈಗೊಳ್ಳಲಿಲ್ಲ (1890 - 1894) ಐದನೆಯವನಾದ ಮಹಂತ ರಾಮಕೃಷ್ಣದಾಸನು 1900 ರ ವರೆಗೆ ಮಹಂತನಾಗಿದ್ದರೂ ತಿರುಚಾನೂರಿನ ಕಡೆ ಆತನ ದೃಷ್ಟಿ ಹರಿಯಲಿಲ್ಲ. ಆತನ ಸೇವೆ ಶ್ರೀ ವೆಂಕಟೇಶ್ವರಸ್ವಾಮಿಗೆ ಸಲ್ಲುವುದರಲ್ಲಿಯೇ ಆತನ ಕಾಲವೂ ಸಂದುಹೋಯಿತು. 1900 ರಲ್ಲಿ ಆರನೆಯ ಮಹಂತ ಪ್ರಯಾಗದಾಸನು ತಿರುಚಾನೂರು ಪದ್ಮಾವತೀ ಆಲಯದ ವಿಮಾನ ಗೋಪುರದಲ್ಲಿ ಗಿಲೀಟಿನ ಕಳಶ ಸ್ಥಾಪನೆ ಮಾಡಿದನು. ಅಮ್ಮನವರ ಗುಡಿಯಲ್ಲಿದ್ದ ಸುಂದರ ರಾಜಸ್ವಾಮಿಯನ್ನು ಪಕ್ಕದ ಗುಡಿಯಲ್ಲಿ ಪ್ರತಿಷ್ಠಾಪಿಸಿದ. ಸ್ವಾಮಿಯ ನಿತ್ಯಪೂಜೆಗೆ ಏರ್ಪಾಡು ಮಾಡಿ ಆಭರಣಗಳನ್ನೂ ಮಾಡಿಸಿದನು. ಅಮ್ಮನವರ ಉತ್ಸವವಿಗ್ರಹಕ್ಕೆ ಕರ್ಣಪತ್ರಗಳನ್ನೂ ಹಸ್ತಕವಚಗಳನ್ನೂ ಮಾಡಿಸಿದ. ಅಲ್ಲಿಯೇ ಇದ್ದ ಶ್ರೀನಿವಾಸ ವಿಗ್ರಹಕ್ಕೆ ಆಭರಣಗಳನ್ನು ಮಾಡಿಸಿದ. ಆಲಯದ ಅಂಗಳದಲ್ಲಿ ಹಾಸುಗಲ್ಲುಗಳನ್ನು ಹೊಂದಿಸಿ ಧ್ವಜಸ್ತಂಭಕ್ಕೆ ಚಿನ್ನದ ಮುಲಾಮಿನ ಕವಚ ಮಾಡಿಸಿದನು. ಆಲಯದ ದಕ್ಷಿಣಕ್ಕೆ ಯಾತ್ರಿಕರು ಇಳಿದುಕೊಳ್ಳಲು ಒಂದು ಸತ್ರವನ್ನು ನಿರ್ಮಿಸಿದ. ನಿಂತು ಹೋಗಿದ್ದ ತೆಪ್ಪೋತ್ಸವವನ್ನು ಪುನಃ ಪ್ರಾರಂಭಿಸಿದ.

**ಆಧಾರ - ಡಾ|| ಎನ್. ರಮೇಶನ್.**

## ಆಧುನಿಕ ಕಾಲದಲ್ಲಿ ತಿರುಚಾನೂರು

ಈಗ ಇಪ್ಪತ್ತನೆಯ ಶತಮಾನದ ನಂತರ ತಿರುಚಾನೂರು ಪ್ರಾಧಾನ್ಯದಲ್ಲಿ ಬೆಳೆದಿದೆ. ಯಾತ್ರಿಕ ಭಕ್ತರ ಸಂದಣಿಯೂ ದಿನೇ ದಿನೇ ಹೆಚ್ಚುತ್ತಿದೆ. ತಿರುಪತಿಯಿಂದ ಐದು ಮೈಲಿ ದೂರದಲ್ಲಿದ್ದರೂ ಪ್ರತಿ ಐದು ನಿಮಿಷಕ್ಕೆ ಒಂದರಂತೆ ಖಾಸಗೀ ಸರ್ಕಾರೀ ಬಸ್‌ಗಳು ಇವೆ. ಎರಡು ಮುಖದ ಸಂಚಾರದ ರಸ್ತೆಗಳಾಗುತ್ತಿವೆ. ತಿರುಪತಿಯಿಂದ ತಿರುಚಾನೂರಿನವರೆಗೆ ಊರೇ ಬೆಳೆದಿದೆಯೋ ಎಂಬಂತಿದೆ. ತಿರುಚಾನೂರಿನಲ್ಲಿ ಅಮ್ಮನವರ ಆಲಯ ಮತ್ತಷ್ಟು ಹೆಚ್ಚಿನ ಮಂದಿಯನ್ನು ಆಕರ್ಷಿಸುತ್ತ ತಿರುಮಲೆಯ ಯಾತ್ರೆಯು ಅಮ್ಮನವರ ದರ್ಶನ ಮಾಡದೆ ಮುಕ್ತಾಯವಾಗದು ಎಂಬ ನಂಬಿಕೆಯನ್ನು ಜನರಲ್ಲಿ ಹುಟ್ಟಿಸಿದೆ. ಇಲ್ಲಿಂದ ತಿರುಮಲೆಗೆ ಹಾಗೂ ತಿರುಮಲೆಯಿಂದ ಇಲ್ಲಿಗೆ ನೇರ ಬಸ್ ಸೌಕರ್ಯವಿದೆ. ತಿರುಚಾನೂರಿನಲ್ಲಿರುವ ತೋಳಪ್ಪ ಉದ್ಯಾನವನದಲ್ಲಿ ಹಲವಾರು ಕಲ್ಯಾಣ ಮಂಟಪಗಳಿವೆ. ತಕ್ಕ ಮಟ್ಟಿಗಿನ ವಸತಿ ಸೌಕರ್ಯವೂ ಉಂಟು. ಉತ್ಸವ ಸಮಯಗಳಲ್ಲಿ ಹೆಚ್ಚಿನ ಬಸ್ ಸೌಕರ್ಯ ವೇರ್ಪಡುತ್ತದೆ. ಆಲಯದ ಪಕ್ಕದಲ್ಲಿ ಸುಸಜ್ಜಿತವಾದ ಆಸ್ಥಾನ ಮಂಟಪವಿದ್ದು ಬ್ರಹ್ಮೋತ್ಸವದ ಸಾಂಸ್ಕೃತಿಕ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆಯುತ್ತವೆ. ಅಮ್ಮನವರ ಆಲಯದಲ್ಲಿ ನಿತ್ಯ ಪ್ರಸಾದ ಯೋಜನೆಯುಂಟು. ಅದಕ್ಕಾಗಿ ದಾನಗಳನ್ನೂ ಸ್ವೀಕರಿಸುವುದುಂಟು. ಬ್ರಹ್ಮೋತ್ಸವ ಸಮಯದಲ್ಲಿ ತಿ.ತಿ.ದೇ.ಗಳ ವಿವಿಧ ಅಂಗಸಂಸ್ಥೆಗಳ ವಸ್ತು ಪ್ರದರ್ಶನಗಳೂ ಏರ್ಪಾಡಾಗುತ್ತವೆ. ಯಾತ್ರಿಕರಿಗೆ ಹೆಚ್ಚಿನ ಅನುಕೂಲದಲ್ಲಿ ಅಮ್ಮನವರ ದರ್ಶನವಾಗುವಂತೆ ಏರ್ಪಾಡುಗಳನ್ನು ಮಾಡಲಾಗುತ್ತದೆ.

ಅಮ್ಮನವರಿಗೆ ಉತ್ಸವವಾಗುವುದೆಂದರೆ ತಿರುಚಾನೂರಿನಲ್ಲಿ ಪ್ರತಿಬೀದಿಯೂ ಅಲಂಕಾರಗೊಳ್ಳುತ್ತದೆ. ತಿ.ತಿ.ದೇ. ಆಡಳಿತ ವುಂಟಾದ ಈ ಎಪ್ಪತ್ತು ವರ್ಷಗಳಲ್ಲಿ ಬ್ರಹ್ಮೋತ್ಸವವನ್ನು ಹೆಚ್ಚು ಮಂದಿಯ ಹಾಜರಾತಿಯಲ್ಲಿ ಮಾಡುವ ತಿ.ತಿ.ದೇ. ಸಂಕಲ್ಪ ಫಲಸ್ವರೂಪ ಪಡೆದಿದೆ. ತಿರುಪತಿಯಿಂದಲೇ ತಿರುಚಾನೂರು ಮಾರ್ಗವೆಲ್ಲ ಅಲಂಕಾರ ಗೊಳ್ಳುತ್ತದೆ.

ಪ್ರತಿ ದಿನವೂ ನಡೆಯುವ ಅಮ್ಮನವರ ಉತ್ಸವಗಳು ಹೆಚ್ಚು ಜನವನ್ನು ಆಕರ್ಷಿಸುವಲ್ಲಿ ಹೆಚ್ಚಿನ ಅಲಂಕಾರವನ್ನು ಪಡೆದಿದೆ.

- ಬಿ. ಎನ್. ಶ್ರೀನಿವಾಸನ್.

## ಪಂಚಮೀ ತೀರ್ಥ ಪ್ರಸಿದ್ಧಿ

ತಿರುಚಾನೂರು ಬ್ರಹ್ಮೋತ್ಸವದ ಪಂಚಮೀ ತೀರ್ಥ ಐತಿಹಾಸಿಕ ಪ್ರಸಿದ್ಧಿ ಪಡೆದಿದೆ. ಪಂಚಮೀ ತೀರ್ಥೋತ್ಸವಕ್ಕೆ ತಿರುಪತಿಯ ಸುತ್ತಮುತ್ತಲ ಜನ ತಂಡೋಪತಂಡವಾಗಿ ಸೇರುತ್ತಾರೆ. ಲಕ್ಷ್ಮೀದೇವಿ ಈ ಪದ್ಮ ಸರೋವರದಲ್ಲಿ ಕಾರ್ತೀಕ ಮಾಸದ ಶುಕ್ಲ ಪಕ್ಷದ ಪಂಚಮಿ ಶುಕ್ರವಾರ ಉತ್ತರಾಷಾಢ ನಕ್ಷತ್ರದಲ್ಲಿ ಪದ್ಮಾವತೀ ದೇವಿಯಾಗಿ ಆವಿರ್ಭವಿಸಿದಳು ಎಂದು ಭಾವಿಸಿ ಮುತ್ತೈದೆಯರು ಹರಿದ್ರಾ ಕುಂಕುಮ ಧರಿಸಿ ಈ ಸರೋವರದಲ್ಲಿ ಅಂದು ಸ್ನಾನಮಾಡುವರು. ಈ ಸಂಪ್ರದಾಯದ ಹಿನ್ನೆಲೆಯಲ್ಲಿ ಒಂದು ಕಥೆಯಿದೆ.

ಭೃಗುವಿನ ನಡತೆಯಿಂದ ವ್ಯಗ್ರಳಾದ ಲಕ್ಷ್ಮಿ ವೈಕುಂಠವನ್ನು ಬಿಟ್ಟು ಪಾತಾಳ ಸೇರಿ ಕಪಿಲ ಮಹರ್ಷಿಯಿಂದ ಪೂಜೆ ಪಡೆದಳು. ಅಗಸ್ತ್ಯ ಪ್ರಾರ್ಥನೆಯಂತೆ ಆಕೆ ಕೊಲ್ಹಾಪುರವನ್ನು ಸೇರಿದಳು. ಆಕೆಯನ್ನು ಹುಡುಕಿ ಹೊರಟ ಸಿರಿಯ ಹೊರತು ಆದ ಶ್ರೀನಿವಾಸನಿಗೆ ಅಶರೀರವಾಣಿ ಕೇಳಿಸಿತು - 'ತಿರುಚಾನೂರು ಪ್ರದೇಶಕ್ಕೆ ಹೋಗಿ ಸುವರ್ಣ ಮುಖಿ ನದೀತೀರದಲ್ಲಿ ಧ್ಯಾನ ಮಾಡಿದರೆ ಲಕ್ಷ್ಮಿ ಅಲ್ಲಿನ ಸರೋವರದಲ್ಲಿ ಕಂಡುಬರುವಳು'. ಅದರಂತೆ ತಿರುಚಾನೂರು ಸೇರಿದ ಸ್ವಾಮಿ ತನ್ನ ಕುಂತಾಯುಧದಿಂದ ಭೂಮಿಯ ತೋಡಿ ಸರೋವರ ಮಾಡಿದ. ದೇವಲೋಕದಿಂದ ಇಂದ್ರನ ಅನುಮತಿ ಪಡೆದು ವಾಯುವು ಕಮಲ ಪುಷ್ಪಗಳನು ತಂದು ನೀಡಿದ. ಆ ಕಮಲಗಳು ಮುಚ್ಚಿಕೊಳ್ಳದಂತೆ, ತೆರೆದೇ ಇರುವಂತೆ ನೋಡಿಕೊಳ್ಳಲು ಸೂರ್ಯನನ್ನು ಅಲ್ಲಿಯೇ ಪಶ್ಚಿಮಾಭಿಮುಖವಾಗಿ ನಿಲ್ಲಲು ನಿಯಮಿಸಿದ. ಶ್ರೀನಿವಾಸನ ಧ್ಯಾನ ಫಲ ನೀಡಿತು. ಪದ್ಮಾವತಿ ಕಮಲದ ಕೊಳದಲ್ಲಿ ಅಲರ ಮೇಲಿನ ಮಂಗೆಯಾಗಿ ಕಂಡು ಬಂದಳು. ಅನಂತರ ಆಕಾಶ ರಾಜನ ಮಗಳಾಗಿ ಭೂಮಿಯಲ್ಲಿ ಅವತರಿಸಿದಳು. ಶ್ರೀನಿವಾಸ ಬೆಟ್ಟದ ತನ್ನ ಬಿಡಾರಕ್ಕೆ ಹೊರಟ.



ಆ ನಂತರದ ಕಥೆ ಪ್ರಸಿದ್ಧವಾದದ್ದೇ. ಶ್ರೀನಿವಾಸ ಕಲ್ಯಾಣದ ಕಥೆ ಯಾರಿಗೆ ತಿಳಿದಿಲ್ಲ. ಆಕಾಶರಾಜ ಸ್ವಾಮಿಗೆ ಪದ್ಮಾವತಿಯನ್ನು ಧಾರೆಯೆರೆದು ಕನ್ಯಾದಾನ ಮಾಡಿದ. ಸ್ವಾಮಿ ಬೆಟ್ಟದಲ್ಲಿ ವಕ್ಷಃಸ್ಥಳ ಲಕ್ಷ್ಮೀ ಸಹಿತನಾಗಿ ನೆಲೆಸಿದ.

ಆಧಾರ - ಕೆ. ಶ್ರೀನಿವಾಸುಲು ಶೆಟ್ಟಿ

★★★★★



# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು
# ಆರ್ಜಿತ ಸೇವಾ ವಿವರ



**ಕಲ್ಯಾಣೋತ್ಸವ :**

ಬ್ರಹ್ಮೋತ್ಸವ ಹಾಗೂ ಹಲವು ಉತ್ಸವದಿನಗಳ ಹೊರತು ಪ್ರತಿದಿನವೂ ಕಲ್ಯಾಣ ಮಂಟಪದಲ್ಲಿನಡೆಯುವ ಉತ್ಸವ.

ಶುಲ್ಕ - **ರೂ. 500/-** ಕಾಲ - ಬೆಳಗ್ಗೆ 10-30 ಗಂ|| ಪ್ರವೇಶಾವಕಾಶ -5 ಮಂದಿಗೆ ಬಹುಮಾನ - ಉತ್ತರೀಯ ಕುಪ್ಪುಸದಕಣ.

**ಅಷ್ಟದಳ ಪಾದಪದ್ಮಾರಾಧನೆ :**

ಪ್ರತಿ ಶುಕ್ರವಾರ ನಡೆಯುವ ಅಮ್ಮನವರ ಅರ್ಚನಸೇವೆ. ಇದರಲ್ಲಿ 108 ಬಂಗಾರದ ಕಮಲಗಳನ್ನು ಬಳಸಲಾಗುತ್ತದೆ.

ಶುಲ್ಕ - **ರೂ. 1500/-** ಕಾಲ - ಬೆಳಗ್ಗೆ 6-30 ಗಂ|| ಪ್ರವೇಶಾವಕಾಶ - 5 ಮಂದಿಗೆ, ಬಹುಮಾನ - 10 ಗ್ರಾ|| ಬೆಳ್ಳಿ ಪದಕ, ವಸ್ತ್ರ

**ತಿರುಪ್ಪಾವಡಾ ಸೇವೆ :**

ಪ್ರತಿ ಗುರುವಾರ ನಡೆಯುವುದು.

ಶುಲ್ಕ - **ರೂ. 3000/-**, ಕಾಲ - ಬೆಳಗ್ಗೆ 6-30. ಪ್ರವೇಶಾವಕಾಶ - 10 ಮಂದಿಗೆ. ಪ್ರಸಾದ - ಲಾಡು 20, ವಡೆ 20, ಅಪ್ಪ 20, ದೋಸೆ 20, ಬಹುಮಾನ - ರೇಷ್ಮೆ ವಸ್ತ್ರ

**ಊಂಜಲ್ ಸೇವೆ :**

ಪ್ರತಿ ದಿನ ಸಂಜೆ - 5 ಗಂಟೆಯಿಂದ 6 ಗಂಟೆಯ ಒಳಗೆ ನಡೆಯುವ ಉಯ್ಯಾಲೆ ಸೇವೆ.

ಶುಲ್ಕ - **ರೂ. 116/-**, ಶಾಶ್ವತ ಶುಲ್ಕ - ರೂ.

**ಅಭಿಷೇಕ :**

ಪ್ರತಿ ಶುಕ್ರವಾರ ಬೆಳಗ್ಗೆ 6 ಗಂಟೆಗೆ ನಡೆಯುವ ಈ ಸೇವೆಯ ಶುಲ್ಕ - **ರೂ. 100/-** (ಒಬ್ಬರಿಗೆ).

**ನಿತ್ಯಾರ್ಚನೆ :**

ಒಂದು ವರ್ಷಕ್ಕೆ (ಒಬ್ಬರಿಗೆ) ಶುಲ್ಕ - **ರೂ. 150/-**.

**ಶ್ರೀ ಲಕ್ಷ್ಮೀ ಪೂಜೆ :**

ಪ್ರತಿ ಉತ್ತರಾಷಾಢ ನಕ್ಷತ್ರದ ದಿನದಲ್ಲಿ, ಶ್ರಾವಣಮಾಸ, ತೈ ಮಾಸಗಳ ಶುಕ್ರವಾರಗಳಲ್ಲಿ ನಡೆಯುವುದು.

ಶುಲ್ಕ - **ರೂ. 116/-** (ಒಬ್ಬರಿಗೆ)

| ಪ್ರಸಾದ ನಿವೇದನೆಗಳ ಶುಲ್ಕ | | ಸೇವಾ ಶುಲ್ಕ | | |
|---|---|---|---|---|
| ದಧ್ಯೋದನ | ರೂ. 100/- | 1. ಸುಪ್ರಭಾತ | ರೂ. 10/- | ಒಬ್ಬರಿಗೆ. |
| ಪುಳಿಯೋಗರೆ | ರೂ. 225/- | 2. ಸಹಸ್ರನಾಮಾರ್ಚನೆ | ರೂ. 10/- | ಒಬ್ಬರಿಗೆ. |
| ಪೊಂಗಲ್ | ರೂ. 250/- | 3. ಅರ್ಚನೆ - ಆರತಿ | ರೂ. 5/- | ಒಬ್ಬರಿಗೆ. |
| ಸಕ್ಕರೆ ಪೊಂಗಲ್ | ರೂ. 300/- | 4. ವಿಶೇಷ ಪ್ರವೇಶ | ರೂ. 5/- | ಒಬ್ಬರಿಗೆ. |
| ಶಾಕರ ಬಾತ್ | ರೂ. 300/- | 5. ಶೀಘ್ರ ದರ್ಶನ | ರೂ. 20/- | ಒಬ್ಬರಿಗೆ. |
| ಸೀರಾ | ರೂ. 550/- | | | |
| ದೋಸೆ | ರೂ. 125/- | | | |

**ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆ**

ಆಸಕ್ತ ದಾನಿಗಳು ಒಂದು ಸಾವಿರ ಹಾಗೂ ಅದರ ಗಣಕಗಳಲ್ಲಿ ವಂತಿಗೆಗಳನ್ನು ನೀಡಬಹುದು.

**ಸೂಚನೆ :** ತಿರುಪ್ಪಾವಡಾ ಸೇವೆ ಹಾಗೂ ನಿವೇದನೆಗಳಿಗಾಗಿ ಒಂದು ದಿನ ಮೊದಲೇ ಶುಲ್ಕ ನೀಡಬೇಕಾಗುತ್ತದೆ.

**ಕಾರ್ಯನಿರ್ವಹಣಾಧಿಕಾರಿ.**

# ಶ್ರೀನಿವಾಸ ಹಾಗೂ ಹರಿದಾಸರು



**ಡಾ॥ ಕೆ. ಎಂ. ಕೃಷ್ಣರಾವ್**

ಹರಿದಾಸರು ಎಂದರೆ ಶ್ರೀಹರಿಯ ಭಕ್ತರು ಎಂದರ್ಥ. ವಿಶಾಲಾರ್ಥದಲ್ಲಿ ಎಲ್ಲರೂ ಶ್ರೀಹರಿದಾಸರೇ. ಆದರೆ ಕರ್ಣಾಟಕದಲ್ಲಿ 14-15 ನೆಯ ಶತಮಾನಗಳಲ್ಲಿ ಹರಿದಾಸಪಂಥ ಎಂಬೊಂದು ಪಂಥವೇ ಮುಳಬಾಗಿಲಿನ ಶ್ರೀಪಾದರಾಜರಿಂದ ಪ್ರಾರಂಭವಾಯಿತು. ಸುಲಭ ಶೈಲಿಯಲ್ಲಿ ರಾಗ ತಾಳ ಲಯಬದ್ಧವಾಗಿ ನೀತಿಬೋಧೆ, ಅನುಷ್ಠಾನ ಮಾರ್ಗ, ಸಿದ್ಧಾಂತಸಾರ, ಬಾಳು ಹಸನಾಗುವ ಮಾರ್ಗ; ಇಹ ಪರ ಗಳೆರಡರಲ್ಲಿಯೂ ಸುಖ ದೊರೆಯುವ ಹಾದಿಯ ಕೀರ್ತನೆಗಳನ್ನು ತಾಯ್ನುಡಿಯಾದ ಕನ್ನಡದಲ್ಲಿ ರಚಿಸಿ, ಪೂಜಾಕಾಲದಲ್ಲಿ ಅವುಗಳನ್ನು ಹಾಡುವ - ಹಾಡಿ ನರ್ತಿಸುವ ಒಂದು ಪದ್ಧತಿ ಕಾರ್ಯರೂಪಕ್ಕೆ ಬಂದಿತು. ಅವರಿಂದ ಅವರ ಶಿಷ್ಯರಾದ, ವಿಜಯನಗರದ ಐವರು ದೊರೆಗಳಿಗೆ ರಾಜಗುರುವೆನಿಸಿದ ವ್ಯಾಸರಾಜರು ಈ ಪಂಥವನು ಮುಂದುವರಿಸಿ, ತಾವೇ ಅನೇಕ ಕೃತಿಗಳನ್ನು ಕನ್ನಡದಲ್ಲಿಯೂ ರಚಿಸಿದುದಲ್ಲದೆ, ಪುರಂದರದಾಸರ ಮತ್ತು ಕನಕದಾಸರ ಮೂಲಕ ಈ ಪಂಥ ಇತೋಪ್ಯತಿಶಯವಾಗಿ ಬೆಳೆಯಲು ಕಾರಣರಾದರು. ಹರಿದಾಸ ಸಾಹಿತ್ಯ ಕನ್ನಡದಲ್ಲಿ ಭೂಯಿಷ್ಠವಾಗಿ ಸೃಷ್ಟಿಯಾಯಿತು. ಕನ್ನಡಸಾಹಿತ್ಯ ಸಮೃದ್ಧವಾಯಿತು, ಶ್ರೀಮಂತವಾಯಿತು.

ಇದಾದ ಕೆಲವು ವರ್ಷಗಳ ತರುವಾಯ ರಾಯಚೂರು ಜಿಲ್ಲೆಯಲ್ಲಿ ವಿಜಯದಾಸರ ನೇತೃತ್ವದಲ್ಲಿ, ಅವರ ಶಿಷ್ಯ ಪ್ರಶಿಷ್ಯರ ಮೂಲಕ ಹರಿದಾಸರ ಕೃತಿಗಳು ಬಹುವಾಗಿ ರಚಿತವಾದವು. ಇವರಲ್ಲಿ ಪ್ರಮುಖರಾದವರು ಪಂಗನಾಮದ ತಿಮ್ಮಣ್ಣಯ್ಯನವರು, ಮೋಹನದಾಸರು, ಗೋಪಾಲದಾಸರು, ಜಗನ್ನಾಥದಾಸರು, ಕರ್ಜಗಿದಾಸರು, ಪ್ರಾಣೇಶದಾಸರು, ಪ್ರಸನ್ನ ವೆಂಕಟದಾಸರು, ಕಲ್ಲೂರು ಸುಬ್ಬಣ್ಣ ದಾಸರು ಇತ್ಯಾದಿ.

ವೇಣುಗೋಪಾಲವಿಠಲರಿಂದ ಮೋಹನ ದಾಸರಿಂದ ಬಂದ ಪರಂಪರೆಯಿಂದ ಈ ಪಂಥ ಈಗಲೂ ಬೆಳೆಯುತ್ತ ಜೀವಂತವಾಗಿದೆ.

ಹರಿದಾಸರ ಅಂಕಿತಗಳಲ್ಲಿ ಹೆಚ್ಚಾಗಿ ವಿಠಲ ಶಬ್ದಸೇರಿಕೊಂಡಿದೆ. ಇದು ಶ್ರೀಪಾದರಾಜರಿಗೆ ಫಂಡರಪುರದಲ್ಲಿ ದೊರೆತ ಸಂಪುಷ್ಪದಲ್ಲಿದ್ದ ಶ್ರೀರಂಗವಿಠಲನಿಂದ ಪ್ರಾರಂಭವಾಯಿತೆನ್ನ ಬಹುದು.

ಹರಿದಾಸರೆಲ್ಲ ವೈಷ್ಣವ ಕ್ಷೇತ್ರಗಳಿಗೆ, ಕೆಲವು ಶೈವಕ್ಷೇತ್ರಗಳಿಗೂ (ದ್ವಾದಶಲಿಂಗಗಳೆಂದು ಪ್ರಸಿದ್ಧವಾದುವು - ಶ್ರೀಶೈಲ, ಕಾಶೀ - ಮೊದಲಾದುವು) ಯಾತ್ರೆ ಹೋಗಿಬರುವುದು ರೂಢಿ. ವೈಷ್ಣವ ಕ್ಷೇತ್ರಗಳಲ್ಲಿ ಉಡುಪಿಯ ಅನ್ನಬ್ರಹ್ಮ, ಫಂಡರಪುರದ ನಾದಬ್ರಹ್ಮ ಮತ್ತು ತಿರುಪತಿಯ ಕಾಂಚನಬ್ರಹ್ಮ ಇವು ಮುಖ್ಯವಾದುವು.

ವಿಠಲ ಹರಿದಾಸರ ಪರಮ ಆರಾಧ್ಯದೈವ - ಅಜ್ಞಾನವನ್ನು ಕಳೆವ ಜ್ಞಾನಪ್ರದ ವಿಠಲ. ಉಡುಪಿ ದ್ವೈತಿಗಳಿಗೆ ಪ್ರಮುಖ ಕ್ಷೇತ್ರ, ಅವರ ಆಧ್ಯಾತ್ಮಿಕ ರಾಜಧಾನಿ ಎಂದರೂ ಸಲ್ಲುವುದು.

ಉಡುಪಿ ಪ್ರಖ್ಯಾತವಾಗುವ ಮುಂಚಿನಿಂದಲೂ ಪ್ರಸಿದ್ಧವಾದ ತಿರುಮಲೆ ಪರಮ ವೈಷ್ಣವಕ್ಷೇತ್ರವೆನಿಸಿ, ಸ್ವಯಂವ್ಯಕ್ತನಾದ ಶ್ರೀನಿವಾಸನ ದರ್ಶನ - ಸಪ್ತಗಿರಿ ಸ್ಪರ್ಶ ಪರಮಪಾವನ ಎಂಬ ನಂಬಿಕೆ ವೈಷ್ಣವರಲ್ಲೆಲ್ಲಾ ಬಹುಕಾಲದಿಂದ ಇದೆ.

ಹರಿದಾಸರೆಲ್ಲ ಈ ಸಪ್ತಶೈಲಕ್ಷೇತ್ರಯಾತ್ರೆ ಮಾಡಿದವರೆ. ಅಷ್ಟೇ ಅಲ್ಲ; ಪ್ರತಿವರ್ಷವೂ ಅಲ್ಲಿ ವಿಜೃಂಭಣೆಯಿಂದ ನವರಾತ್ರಿ ಕಾಲದಲ್ಲಿ ನಡೆಯುವ ಶ್ರೀ ವೆಂಕಟೇಶನ ಬ್ರಹ್ಮೋತ್ಸವ ಸಮಯಕ್ಕೆ ಬಹುತೇಕ ಎಲ್ಲ ಹರಿದಾಸರೂ ಹಿಂದೆಯೂ ಬರುತ್ತಿದ್ದರು. ಕಾಲುನಡಿಗೆಯಲ್ಲೇ ಬರುವ ಸಂಪ್ರದಾಯದವರು, ದೇವಸ್ಥಾನದೊಳಗೆ ದೊರೆಯುವ ಶ್ರೀನಿವಾಸನ ಪ್ರಸಾದವಷ್ಟನ್ನೇ ಸ್ವೀಕರಿಸಿ ಇರುವವರು, ಗೋಪಾಳದಿಂದ ಬಂದ ಆಹಾರವಷ್ಟನ್ನೇ ತೆಗೆದುಕೊಂಡು ಹತ್ತು ದಿನವೂ ಅಲ್ಲೇ ಇರುವ ಭಕ್ತರು - ಹೀಗೆ ಅನೇಕ ಬಗೆಯ ನಿಯಮನಿಷ್ಠೆ ನೋಂಪಿಗಳಲ್ಲಿ ನಿರತರಾಗಿ ಶ್ರೀನಿವಾಸನನ್ನು ಹರಿದಾಸರು ಪರಮಭಕ್ತಿಯಿಂದ ಸೇವಿಸಿ ಅವನ ಅನುಗ್ರಹಕ್ಕೆ ಪಾತ್ರರಾಗುತ್ತಿದ್ದರು.

ತಿರುವೇಂಗಡನನ್ನು ಹರಿದಾಸರು ಹೃದಯದುಂಬಿ ಭಕ್ತಿ ಭರಿತರಾಗಿ ಪ್ರಮೇಯ ಪುಂಜವಾಗಿ ಸಿದ್ಧಾಂತಕ್ಕೆ ಅನುಸಾರವಾಗಿ ಪುರಾಣೋಕ್ತಿಯನ್ನನುಸರಿಸಿ ಹಾಡಿದ್ದಾರೆ. ಇಂತಹ ಕೃತಿಗಳು ಬಹು ಸಂಖ್ಯೆಯಲ್ಲಿವೆ. ಕೃತಿರಚನೆ ಮಾಡಿರುವ ಪ್ರತಿಯೊಬ್ಬ ಹರಿದಾಸನೂ ಶ್ರೀನಿವಾಸನನ್ನು ಕುರಿತು ಹಾಡದೆ ಹೋಗಿಲ್ಲ. ಬೆಟ್ಟದ ಮಹಿಮೆ, ಬೆಟ್ಟದೊಡೆಯನ ಹಿರಿಮೆ ಗರಿಮೆಗಳನ್ನು ಮನದಣಿಯ ಸ್ತುತಿಸಿದ್ದಾರೆ ಹರಿದಾಸರೆಲ್ಲ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ನೆನೆಯಬಹುದು.

ಅನೇಕ ಹರಿದಾಸರ ಅಂಕಿತ ವೆಂಕಟೇಶನ ನಾಮವನ್ನೇ ಹೊಂದಿವೆ. ಉದಾಹರಣೆಗೆ ಪ್ರಸನ್ನವೆಂಕಟವಿಠಲ, ವೆಂಕಟವಿಠಲ, ಶ್ರೀನಿವಾಸವಿಠಲ, ಪ್ರಸನ್ನ ಶ್ರೀನಿವಾಸ, ಉರಗಾದ್ರಿವಾಸವಿಠಲ, ತಂದೆ ವೆಂಕಟೇಶವಿಠಲ ಇತ್ಯಾದಿ. ದಾಸಾಗ್ರಣಿ ಪುರಂದರದಾಸರು ಶ್ರೀನಿವಾಸನನ್ನು ಕುರಿತು ಅನೇಕ ಕೃತಿಗಳನು ರಚಿಸಿದ್ದಾರೆ.

ಬಂದು ನಿಂತಿಹ ನೋಡಿ ಭೂತಳದಿ
ವೆಂಕಟ ಇಂದಿರೆಯ ಒಡಗೂಡಿ!

ಇಲ್ಲಿನ ಸ್ವಾರಸ್ಯವೆಂದರೆ, ಎಲ್ಲ ಗುಡಿಗಳಲ್ಲಿಯೂ ಇರುವಂತೆ ಅಮ್ಮನವರ ಗುಡಿ ಎಂದು ಪ್ರತ್ಯೇಕವಾಗಿ ತಿರುಮಲೆಯಲ್ಲಿಲ್ಲ. ಕಥೆಯ ಪ್ರಕಾರವೂ ಪದ್ಮಾವತಿ ತಿರುಚಾನೂರಿನಲ್ಲಿ; ಮಹಾಲಕ್ಷ್ಮಿ ಕೊಲ್ಹಾಪುರದಲ್ಲಿ. ಆದರೆ ವೆಂಕಟೇಶ ಮಾತ್ರ ನಿಂತಿರುವುದು ತಿರುಮಲೆಯಲ್ಲಿ - ಇಂದಿರೆಯ ಒಡಗೂಡಿ!

ಮಾಯಾವೀ ಪರಮಾನಂದಂ
ತ್ಯಕ್ತ್ವಾ ವೈಕುಂಠಮುತ್ತಮಂ
ಸ್ವಾಮಿಪುಷ್ಕರಿಣೀ ತೀರೇ
ರಮಯಾ ಸಹ ಮೋದತೇ

ಎಂದಿದೆ ವೇಂಕಟೇಶ ಸ್ತೋತ್ರದಲ್ಲಿ!

ಉತ್ತಮವಾದ ವೈಕುಂಠಲೋಕವನ್ನು ಬಿಟ್ಟು ಪರಮಾನಂದ ರೂಪೀ ಪರಮಾತ್ಮ ಸ್ವಾಮಿ ಪುಷ್ಕರಿಣೀತೀರದಲ್ಲಿ ರಮಾದೇವಿ ಯೊಂದಿಗೆ ಆನಂದದಿಂದಿದ್ದಾನೆ! ಸಿದ್ಧಾಂತಾನುಸಾರಿಯಾದ ಪ್ರಮೇಯ ಅಡಗಿದೆ ಇಲ್ಲಿ. ಅವನು ಶ್ರೀನಿವಾಸ - ಶ್ರೀ ಎಂದರೆ ಮಹಾಲಕ್ಷ್ಮಿ ಯಾರಲ್ಲಿ ನಿವಾಸಿಯಾಗಿರುವಳೋ ಅವನು ಶ್ರೀನಿವಾಸ. ಶ್ರೀನಿವಾಸನ ವಕ್ಷಸ್ಥಳದಲ್ಲೇ ಇರುವವಳು. ಲಕ್ಷ್ಮೀದೇವಿ ನಿತ್ಯಾವಿಯೋಗಿನಿ. ಅವರಿಬ್ಬರಿಗೆ ವಿಯೋಗ - ವಿರಹ ಎಂಬುದಿಲ್ಲ ಎಂಬ ತತ್ತ್ವ ಪುರಂದರದಾಸರ ಈ ನುಡಿಯಲ್ಲಿ ಅಡಗಿ ಕುಳಿತಿದೆ.

ತಿರುಮಲೆಯಲ್ಲಿ ವರದಾಯಕನಾಗಿ ನಿಂತಿರುವ ವೆಂಕಟೇಶನನ್ನು ಅಡಿಯಿಂದ ಮುಡಿಯವರೆಗೆ ವರ್ಣಿಸುತ್ತಾ ಪುರಂದರ ದಾಸರು - 'ತ್ರಿದಶಪೂಜಿತ ತ್ರಿಭುವನೇಶ ಸದುವಿಲಾಸದಿ ಸ್ವಾಮಿತೀರ್ಥದಿ ಉದಿಸುತಿರೆ ಸಿರಿಮಹಿಳೆ ಸಹಿತದಿ ಪದುಮನಾಭ ಪುರಂದರವಿಠಲ ಪ್ರತಿ ವರ್ಷ ಬ್ರಹ್ಮೋತ್ಸವದಿ ಮೆರೆಯುತ ಬಂದು ನಿಂತಿಹ ನೋಡಿ' ಎಂದರು.

ಮಾಡಿದ ತಪ್ಪುಗಳನ್ನೆಲ್ಲಾ ಒಪ್ಪಿಕೊಂಡು ರಕ್ಷಿಸು ಎಂದು (ಸ್ಮರಿಸುವರಪರಾಧಗಳ ತಾ ಸ್ಮರಿಸ ಎಂಬ ಹೆಸರಾಂತ) ತಿಮ್ಮಪ್ಪನನ್ನು ಬೇಡಿಕೊಳ್ಳುತ್ತಾ ವಿಧಿಗಳನ್ನು ಪಾಲಿಸದೆ, ನಿಷೇಧಗಳನ್ನು ತ್ಯಜಿಸದೆ ಇರುವ ಸಾವಿರ ಅಪರಾಧಗಳಲ್ಲಿ ಕೆಲವನ್ನು ಮಾತ್ರ ಪುರಂದರ ದಾಸರು ಪಟ್ಟಿಮಾಡಿದ್ದಾರೆ. ಪಾದರಕ್ಷೆಯನ್ನು ಕಳೆದುಕೊಂಡಾಗ ಶ್ಲೇಷಾರ್ಥದಿಂದ ದಾಸರು ಹಾಡಿದ್ದಾರೆ.

ಪಾಪೋಸು ಹೋದುವಲ್ಲ ಸ್ವಾಮಿ ಎನ್ನ
ಅಪಾರ ದಿನದಿಂದ ಆರ್ಜಿಸಿ ಮಾಡಿದ
ಉರಗಾದ್ರಿಯಲ್ಲಿ ಸ್ವಾಮಿಪುಷ್ಕರಿಣಿ
ಮೊದಲಾದ
ಪರಿಪರಿ ತೀರ್ಥಗಳ ಸ್ನಾನಮಾಡಿ
ಹರಿದಾಸರ ಕೂಡಿ ಗಿರಿರಾಯನ ಮೂರ್ತಿ
ದರುಶನದಲ್ಲಿ ಮೈಮರೆತಿರಲು
ಪಾಪೋಸು ಹೋದುವಲ್ಲ

..............................

ಸ್ವಾಮಿಪುಷ್ಕರಿಣಿ ಸ್ನಾನ ಮಾಡಿದಾಗ, ಹರಿಕಥೆ ಕೇಳಲು ಕುಳಿತಾಗ, ಶ್ರೀನಿವಾಸನ ದರ್ಶನಕ್ಕೆ ತೆರಳಿದಾಗ ಚಪ್ಪಲಿಕಳ್ಳರು ತಮ್ಮ ಕೆಲಸ ತಾವು ಮಾಡಿದರು. ಅದು ಈಗಲೂ ನಡೆಯುತ್ತಿರುವುದೇ. ಇದರ ಇನ್ನೊಂದು ಅರ್ಥ ಪಾದರಕ್ಷೆಗಳನ್ನು ಕಳೆದುಕೊಂಡುದರಿಂದ ನಮ್ಮ ಪಾಪವೆಲ್ಲ (ಪಾಪ+ಓಸು) ಹೋಗುವುದು - ಕಳ್ಳರಿಗೆ ವರ್ಗವಾಗಿ ಹೋದುವು ಎಂದು. ಚಪ್ಪಲಿಕಳ್ಳರು ಕಾಣುವಂತೆ ಚಪ್ಪಲಿ ಲಾಭವನ್ನು ಪಡೆದರು, ಕಾಣದಂತೆ ಚಪ್ಪಲಿ ಕಳೆದು ಕೊಂಡವರ ಪಾಪಗಳನ್ನೆಲ್ಲಾ ಹೊತ್ತುಕೊಂಡರು! ತೋಟಮಾಡಿ ಪಾಪ ಕಳೆದುಕೋ ಎಂಬೊಂದು ಗಾದೆಯೇ ಇದೆ. ತೋಟದಲ್ಲಿರುವ ಹಣ್ಣು ಹೂವು ಕಾಯಿಗಳನ್ನು ಕದ್ದು ತೋಟದವನ ಪಾಪಗಳನ್ನೆಲ್ಲಾ ಕಳ್ಳರು ಕೊಂಡೊಯ್ಯುತ್ತಾರೆ - ಇವರು ಪಾಪ ಕಳೆದುಕೊಳ್ಳುತ್ತಾರೆ! ಮಾಯಾದೇವಿ ಶ್ರೀಭೂದುರ್ಗ ಎಂದು ಮಹಾಲಕ್ಷ್ಮಿಯು ಮೂರು ರೂಪಗಳ ಮೂರು ಕಾರ್ಯಗಳನ್ನು ಮೂರು ವಿಧಜೀವರಲ್ಲಿ ನಡೆಸುತ್ತಾಳೆ. ದುರ್ಗಾರೂಪಕ್ಕೆ ಮಾಯಾದೇವಿ ಎಂದು ಹೆಸರು. ದಾಯಾದಿಗಳು ಎಂದರೆ ದೈತ್ಯರು - ಅವರ ಭಾಗವನ್ನು (ಪಾಪಗಳನ್ನು) ಕೊಂಡೊಯ್ದರು ಎಂಬ ಪ್ರಮೇಯಾರ್ಥವೂ ಇಲ್ಲಿದೆ.

ಕನಕದಾಸರು ತಿರುಪತಿಯ ತಿಮ್ಮಪ್ಪನನ್ನು ಪರಿಪರಿಯಿಂದ ಕೊಂಡಾಡಿದ್ದಾರೆ. ನಿಂದಾ ಸ್ತುತಿರೂಪವಾದ ಅವರ ಒಂದು ಕೃತಿ ಹೀಗಿದೆ.

ಬಂದೆವಯ್ಯ ಗೋವಿಂದ ಶೆಟ್ಟಿ
ಹರಿವಾಣತೀರ್ಥ ಪ್ರಸಾದ ಉಂಟೆನಲಾಗಿ
ಅಪ್ಪವು ಅತಿರಸ ತುಪ್ಪವು ಚಿನಿಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪರೂಪವಾದ ಕಜ್ಜಾಯ ರಾಶಿಗಳನೆಲ್ಲಾ
ಛಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ
ಒಡೆದ ಮಡಕೆ ತಂದು ಅರೆದು ನಾಮವ
ಮಾಡಿ ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ
ಒಡವೆಯ ಗಳಿಸುವ ಕಡುಲೋಭಿ ಶೆಟ್ಟಿ
ಶೇಷಗಿರಿಯಲ್ಲಿ ವಾಸಮಾಡಿಕೊಂಡು
ದೇಶದೇಶಕ್ಕೆ ಹೆಸರಾದ ಶೆಟ್ಟಿ
ಕಾಸುಕಾಸಿಗೆ ಬಡ್ಡಿ ಗಳಿಸಿಕೊಂಬ ಆದಿ
ಕೇಶವ ನಾರಾಯಣ ಶೆಟ್ಟಿ

- ತಿರುಮಲೆಯಲ್ಲಿರುವ ಕೆಲವು ಪದ್ಧತಿಗಳನ್ನು ಕುರಿತ ಟೀಕೆ ಎಂಬಂತೆ ಮೇಲೆ ಕಂಡರೂ, ಅಂತರ್ಯದಲ್ಲಿ ಅದು ಶ್ರೀನಿವಾಸನ ಸ್ತುತಿಯೇ ಆಗಿದೆ. ವೆಂಕಟೇಶ ಕಾಣಿಕೆಯನ್ನು ಸ್ವೀಕರಿಸಿ ಭಕ್ತರ ಉದ್ಧಾರಕ್ಕೆ ಕಾರಣನಾಗಿದ್ದಾನೆ-ಎಂಬುದೇ ಮಥಿತಾರ್ಥ.

ತಿರುಮಲೆ ಕ್ಷೇತ್ರದಲ್ಲಿ ಹರಿದಾಸರಿಗೆ ಸಂಬಂಧಿಸಿದಂತೆ ಶ್ರೀನಿವಾಸ ಅನೇಕ ಪವಾಡಗಳನ್ನು ಮೆರೆದ ಐತಿಹ್ಯಗಳಿವೆ. ಉತ್ಸವ ಮೂರ್ತಿಯ ಮೆರವಣಿಗೆಯ ನಾಲ್ಕು ಬೀದಿಗಳಲ್ಲಿ ಎರಡನೆಯ ಬೀದಿಯ ಕೊನೆಯ ಚೌಕದ ಮೂಲೆಯಲ್ಲಿ ಸ್ವಾಮಿಯ ಬ್ರಹ್ಮರಥ ನಿಂತುಹೋಗಿ, ವಿಜಯದಾಸರು ಬಂದು ಕರೆದಮೇಲೆ ರಥ ಸಾಗಿಬಂದ ವಿಚಾರ ಪ್ರಸಿದ್ಧವಾದುದು. ಕನಕದಾಸರನ್ನು ಕರೆ ತರುವಂತೆ ಅಧಿಕಾರಿಗೆ ಸ್ವಪ್ನಸೂಚನೆ ಮಾಡಿದ್ದು, ಕನಕದಾಸರನ್ನೇ ದಾರಿಯಲ್ಲಿ ಅಧಿಕಾರಿಯ ಪರಿವಾರದವರು ವಿಚಾರಿಸಿದಾಗ ''ಹಿಂದೆ ಬರುವರ ಮುಂದೆ - ಮುಂದೆ ಬರುವರ ಹಿಂದೆ'' ಎಂದು ಅವರು ಹೇಳಿ ತಮ್ಮ ಪಾಡಿಗೆ ತಾವು ಭಜನೆ ಮಾಡುತ್ತಾ ಮೇಲೆಕ್ಕೇರಿ ಬಂದು ಕಲ್ಲುಮಂಟಪದಲ್ಲಿ ಹಸಿವೆ - ಆಯಾಸಗಳಿಂದ ಬಳಲಿ ಮಲಗಿ ನಿದ್ರಿಸುತ್ತಿದ್ದಾಗ ಸ್ವಾಮಿ ಶ್ರೀನಿವಾಸ ವೇಷಾಂತರದಿಂದ ಬಂದು ಅವರಿಗೆ ಪೊಂಗಲ್ - ಪರಿಮಳೋದಕಗಳನ್ನಿತ್ತು, ಮೈಮೇಲೆ ಜರತಾರೀಪೀತಾಂಬರವನ್ನು

ಹೊದಿಸಿದ್ದು; ಆ ಮೇಲೆ ಅವರೇ ಕನಕ ದಾಸರೆಂದು ಅಧಿಕಾರಿಗಳಿಗೆ ತಿಳಿದಿದ್ದು; ಜಗನ್ನಾಥದಾಸರಿಗೆ ತಿರುಮಲೆಯಲ್ಲಿ ಪ್ರಾಣೋತ್ಕ್ರಮಣ ಸಮಯ (ಅಕಾಲಮೃತ್ಯು) ಸನ್ನಿಹಿತವಾಗ ಗುರುಗೋಪಾಲದಾಸರು ದೇವಸ್ಥಾನದಿಂದ ಪ್ರಸಾದ ಸಿಹಿಪೊಂಗಲನ್ನು ತಂದಿತ್ತು ತಮ್ಮ ಗುರು ವಿಜಯದಾಸರ ಅಪ್ಪಣೆಯ ಮೇಲೆ ಶಿಷ್ಯರಿಗೆ ನಲವತ್ತು ವರ್ಷಗಳ ಅನರ್ಘ್ಯ ಆಯುವನ್ನು ದಾನಮಾಡಿದ್ದು ಪ್ರಸಿದ್ಧವಾಗಿವೆ. ಜೀವಂತವಾಗಿರುವ, ಇತ್ತೀಚಿನವರೆಗೂ ಇದ್ದ ಅನೇಕ ಹರಿದಾಸರಿಗೆ ಅನೇಕ ಪವಾಡಗಳನ್ನು ವೆಂಕಟೇಶ ತೋರಿಸಿ ಕೃಪೆಮಾಡಿ ಅನುಗ್ರಹಿಸಿರುವ ಸಂಗತಿಗಳು ಅಸಂಖ್ಯಾತ ವಾಗಿವೆ.

''ಗಿರಿರಾಜ ಚಿತ್ತ ಉದಾರ ಜೀಯ'' ಎಂಬೊಂದು ಸೊಗಸಾದ ಕೃತಿಯಲ್ಲಿ ವಿಜಯದಾಸರು ಅಪಾರ ಮಹಿಮ ಆಪದ್ಬಂಧು ಆಪನ್ನರಪಾಲಿಪ ವೆಂಕಟೇಶನನ್ನು ಸ್ತುತಿಸಿ ಕಲಿಯುಗದೊಳಗೀ ಪರ್ವತಕೆಲ್ಲೀ ಸರಿಗಾಣೆನು - ಸುರರು ಕಿನ್ನರರು ಇಲ್ಲಿ ತರು ಮೃಗ ಪಕ್ಷಿರೂಪಗಳಿಂದ ಇದ್ದು ನಿನ್ನ ಚರಣಾರಾಧನೆ ಮಾಡುತ್ತಾರೆ - 'ಈ ಬಗೆಯ ಶೃಂಗಾರ ದೊರೆತನ ಠೀವಿಗೆ ಧರಣಿ ಮಂಡಲದಿ ಸರಿಗಾಣೆನೊ, ಹೇ ತಿರುಪತಿ ವೆಂಕಟಗಿರಿರಾಜ' ಎಂದು ಮನದಣಿಯೆ ಕೊಂಡಾಡಿದ್ದಾರೆ.

ಜಗನ್ನಾಥದಾಸರ ''ಶ್ರೀ ವೆಂಕಟಾಚಲ ನಿವಾಸ'' ಎಂಬ ಕೃತಿಯಂತೂ ಶ್ರೀನಿವಾಸನನ್ನು ಪ್ರತ್ಯಕ್ಷೀಕರಿಸಿಕೊಂಡು ಸಾಕ್ಷಾತ್ತಾಗಿ ಅವನೆದುರಿಗೇ ನಿಂತು ಮೊರೆಯಿಡುವಂತೆ ಅತ್ಯಂತ ಹೃದಯಂಗಮವಾಗಿ ಮೂಡಿ ಬಂದಿದೆ.

ದೊಡ್ಡವರ ಕಾಯ್ವುದೇನರಿದು - ಪರಮ
ದಡ್ಡರನೆ ಕಾಯ್ವುದೇ ಬಿರಿದು
ಎನ್ನ ಗುಡ್ಡದಂತಹ ಪಾಪತರಿದು ಕಾಯೋ
ವಡ್ಡಿನಾಯಕ
...............................
ನಿನ್ನಂಘ್ರಿದರುಶನ ಕೊಡದೆ ಹೀಗೆ
ಬನ್ನ ಬಡಿಸುವರೇನೊಂ ಬಿಡದ ನಾನು
ಮುನ್ನ ಮಾಡಿದ ಪಾಪ ಕೆಡುಗೆ ನೀ ಪ್ರ
ಪನ್ನವತ್ಸಲನೆಂದು ನುಡಿಪೆ
ಇಹಪರದಿ ಸೌಖ್ಯಪ್ರದಾತ ನೀನೆ
ಅಹುದೊ ಲೋಕೈಕ ವಿಖ್ಯಾತ ಮಹಾ
ಮಹಿಮ......................
...............................

- ಎಂದು ಪಾಮರರನ್ನು ರಕ್ಷಿಸಿ ಅನುಗ್ರಹಿಸುವ ಶ್ರೀನಿವಾಸನನ್ನು ಪರಿ ಪರಿಯಾಗಿ ಕೊಂಡಾಡಿದ್ದಾರೆ. ವ್ಯಾಸ ವಿಠಲಾಂಕಿತರಾದ ಕಲ್ಲೂರು ಸುಬ್ಬಣದಾಸರು-

''ತಿಳಿಯದೊ ನಿನ್ನಾಟ ತಿರುಪತಿ ವೆಂಕಟ''

-ಎಂಬ ಪ್ರಸಿದ್ಧ ಕೃತಿಯಲ್ಲಿ ದಶಾವತಾರಗಳನ್ನು ರಸವತ್ತಾಗಿ ವಿವಿಧವಾಗಿ ಚಿತ್ರಿಸಿ ''ನಿನ್ನ ರೂಪಿನ ಲೀಲಾ ನೋಡುವ ಜನಕೆ ಕಣ್ಣು ಸಾವಿರವಿಲ್ಲ, ನಾ ಪಾಡಿಪೊಗಳಲು ಪನ್ನಗಾಧಿಪನಲ್ಲ'' ಎಂದಿದ್ದಾರೆ.

ವಿಜಯದಾಸರು ನಿಂದಾಸ್ತುತಿರೂಪದ ಮಂಗಳವನ್ನು ಅಪೂರ್ವವಾದ ಠೀವಿಯಲ್ಲಿ ಭಕ್ತಿಭರಿತವಾಗಿ ಬಣ್ಣಿಸಿದ್ದಾರೆ.

ತೊಳಸದಕ್ಕಿಯ ತಿಂಬ
ಕಿಲುಬು ತಳಿಗೆಯಲುಂಬ
ಕೊಳಗದಲಿ ಹಣಗಳನು ಅಳೆಸಿಕೊಂಬ
ಇಲ್ಲ ಕಾಸು ಎಂದು ಸುಳ್ಳುಮಾತಾಡಿದರೆ
ಎಲ್ಲವನು ಕಸುಗೊಂಬ ಕಳ್ಳದೊರೆಗೆ
ಜಯ ಮಂಗಳಂ ನಿತ್ಯಶುಭ ಮಂಗಳಂ
ತನ್ನ ನೋಡೇನೆಂದು
ಮುನ್ನೂರುಗಾವುದ ಬಂದು
ತನ್ನ ಗುಡಿಯ ಪೊಕ್ಕ ಜನರಿಗೆಲ್ಲ
ಹೊನ್ನು ಹಣಗಳ ಕಸಿದು
ತನ್ನ ದರುಶನಕೊಡದೆ
ಬೆನ್ನೊಡೆಯ ಹೊಯ್ಯುವ ಅನ್ಯಾಯಕಾರಿಗೆ
ಜಯಮಂಗಳಂ ನಿತ್ಯ ಶುಭಮಂಗಳಂ

ತಿರುಮಲೆಯಲ್ಲಿ ಆ ಕಾಲದಲ್ಲಿ ನಡೆಯುತ್ತಿದ್ದ ಕೆಲವು ಪದ್ಧತಿಗಳ ಚಿತ್ರ ಇಲ್ಲಿದೆ. ವೆಂಕಟೇಶನ ದರ್ಶನಕ್ಕಾಗಿ ಬೆಟ್ಟದಲ್ಲಿ ವಿಜಯದಾಸರ ಕಾಲದಲ್ಲಿ ನುಗ್ಗುವ ಜನರನ್ನು ಹತೋಟಿಗೆ ತರಲು ಕೃಷ್ಣಾಜಿನ ಸುರುಳಿಯಲ್ಲಿ ಹೊಡೆಯುವ ಪದ್ಧತಿಯಿದ್ದಿತು ಎಂಬುದೂ ಇದರಿಂದ ತಿಳಿಯಬರುವ ಸಂಗತಿ.

ಜಗನ್ನಾಥದಾಸರು ''ಆ ವೆಂಕಟಗಿರಿಯ ನಂಘ್ರಿ ರಾಜೀವ ಯುಗಳಕಾನಮಿಸುವೆನು'' ಎಂಬ ಕೃತಿಯಲ್ಲಿ ವೆಂಕಟೇಶ ಮಹಾತ್ಮ್ಯದ (ಭವಿಷ್ಯೋತ್ತರ ಪುರಾಣಾಂತರ್ಗತ) ಆಧಾರದಿಂದ ಗಿರಿಯ ಚರಿತ್ರೆಯನ್ನೂ ಚಿತ್ರಿಸಿದ್ದಾರೆ.

ಭೂಸುರನೋರ್ವನು ತೊಂಡಮಾನ ಧರ
ಣೀಶ ನಿಲಯದೆರಿಸಿ ಸತಿಯ
ಕಾಶಿಗೆ ಪೋಗಲು ನೃಪತಿ ಮರೆಯೆ
ಶ್ವಾಸವೈದಿದಳಾ ಸತಿಯು
ಆ ಸಮಯದಿ ದ್ವಿಜವರ್ಯನು ಬೆಸಗೊಳೆ
ಕ್ಲೇಶದಿ ಭೂಮಿಪ ಸಂಸ್ತುತಿಸೆ
ಕೇಶವ ತಾನಸ್ಥಿಗಳ ತರಿಸಿ ಸು
ವಾಸಿನಿ ಶಿಶುಸಹ ಒಲಿದಿತ್ತಾ
ವೃದ್ಧ ಬ್ರಾಹ್ಮಣನು ತುತಿಸೆ ಸಲಿಲದೊಳ
ಗದ್ದಿ ಕುಮಾರತ್ವವನಿತ್ತ
ಅಧ್ವರವೆಸಗಿದ ಋಷಿಗಳ ಮಂತ್ರದ
ಪದ್ಧತಿ ತಿದ್ದಿ ಯಜ್ಞವ ಮಾಡ್ದ
ಮಧ್ಯರಾತ್ರಿಯೊಳು ಬೆಸಗೊಂಡ ನೃಪನು
ಪದ್ರವ ಕಳೆದಾಯುಧವಿತ್ತ
ಮೃದ್ಭಾಂಡವ ರಚಿಸುವನಿಗೊಲಿದವನ
ಚೋದ್ಯ ತೊಂಡಮಾನಗೆ ತೋರ್ದ

ತೊಂಡಮಾನರಾಜನ ಈ ಮರೆವಿನ ಅಪರಾಧವೇ ಶ್ರೀನಿವಾಸ ಮಾನವರಂತೆ ಓಡಾಡುವುದನ್ನುಮಾತನಾಡುವುದನ್ನುತೊರೆದು ಗರ್ಭಗುಡಿಯಲ್ಲಿ ದೇವರಂತೆ ನಿಂತುದಕ್ಕೆ ಕಾರಣ. ಮಾವ ಆಕಾಶ ರಾಜನ ಸೋದರ (ತೊಂಡಮಾನ) ಪೂಜೆ ಮಾಡಿದ ಕನಕತುಳಸೀದಳಗಳ ಮೇಲೆ ಕುಳಿತಿರುತ್ತಿದ್ದವ, ಕುಂಬಾರ ಭೀಮ ಭಕ್ತಿಯಿಂದ ಏರಿಸಿದ ಮಣ್ಣಿನ ತುಳಸಿಗೇ ಒಲಿದುದರ ಕುರುಹಾಗಿಯೇ ಈಗಲೂ ತಿರುಮಲೆಯಲ್ಲಿ ಸಾವಿರಾರು ಮಣ್ಣಿನ ಮಡಕೆಗಳನ್ನು ಉಪಯೋಗಿಸುವುದು.

ಮತ್ತೋರ್ವ ಇತ್ತೀಚಿನ ಹರಿದಾಸರು - ಉರಗಾದ್ರಿವಾಸ ವಿಠಲರು-

ಶ್ರೀನಿವಾಸ - ಶ್ರೀನಿವಾಸ - ದೀನ ರಕ್ಷಕ
ಲೋಕ ಭರಿತ ಶ್ರೀಕಳತ್ರ
ತ್ರಿಕ ಕುದ್ಧಾಮದಧಿನಾಥ
ಶ್ರೀಕಮಲಭವಾದಿವಂದಿತ
ಮುಕುತಾ ಮುಕುತಜನ ಸಂಸೇವಿತ
ಅಖಿಲಾಗಮಕೆ ಅತೀತ

ಶ್ರೀ ಕರಪಲ್ಲವ ಪೂಜಿತ
ಅಖಿಳಜಾಂಡದಿ ವ್ಯಾಪ್ತ
ಭಕುತರ ಗತಿಪ್ರದಾತ
..................................

ಎಂದು ಮುಂದುವರೆಯುತ್ತಾ ತಿರುಮಲೆಗೆ ಹೋಗಿ ಹೋಗಿ ಶ್ರೀನಿವಾಸನ ದರ್ಶನವನ್ನು ಮಾಡಿ ಆನಂದ ತುಂದಿಲರಾಗಿ ತಮಗಾದ ಅನುಭವವನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಕಂಡೆನಾ ಬ್ರಹ್ಮಾಂಡದೊಡೆಯನ
ಶ್ರೀವೆಂಕಟದೇವನ
ಕಂಡೆನಾ ಭಕುತರ ಹಿಂಡುಗಳುರೆ
ಕೊಂಡಾಡುತಲಿರೆ ಪದ ಪುಂಡರೀಕವ ನಾ
............ಆಂಗೀರಸದಿ ಮಂಗಳ
ಪೌರ್ಣಮಾ ಭಾರ್ಗವಾಸರದಿ
ಭಾರ್ಗವೀಪತಿ ನನ್ನ ನನುಗ್ರಹದೀ
ನಗದೊಡೆಯನೆ ಭಕ್ತ
ರಘು ಹರಿಸುತ ಪನ್ನಗಗಿರಿಯೊಡೆಯ
ವಿಸ್ಮಯ ಗುಡಿಯನ್ನು
ಬಗೆ ಬಗೆ ಸ್ತುತಿಪರ
ಹಿಂಡನ್ನು ನಾ ಕಂಡೆನೋ
ಜಾಗುಮಾಡದೆ ಬಾಯಿ
ಬೀಗವ ಕೈಕೊಂಡು
ಸ್ವಾಮಿ ಕಾಸಾರದಿ ಸ್ನಾನ ಮಾಡಿಕೊಂಡು
ಬಾಗಿ ವರಾಹದೇವರ ವಂದಿಸಿ
ಬೇಗದಿ ಹರಕೆ ಕೈಕೊಂಡಿಹ ದೇವನ
ಪನ್ನಗಾಚಲವಾಸ ಪ್ರಪನ್ನರ ಪಾಲಿಪ ಶ್ರೀಶ

ಸರ್ವೇಶನನ್ನು ಸಚಿತ್ರವಾಗಿ ಬಣ್ಣಿಸುತ್ತಾರೆ.

ಕಾಂಚನ ಬ್ರಹ್ಮನೆಂದು ಇಳೆಯಲ್ಲಿ ಪ್ರಖ್ಯಾತನಾದ ಶ್ರೀನಿವಾಸ ದೇವರನ್ನು ಅವನ ಆವಾಸಸ್ಥಾನವಾದ ಭೂವೈಕುಂಠವೆಂದು ಪ್ರಸಿದ್ಧವಾದ ತಿರುಮಲೆಯನ್ನು ಎಷ್ಟು ಪೂಜ್ಯಬುದ್ಧಿಯಿಂದ ನೋಡುತ್ತಾರೆ. ಹರಿದಾಸರು ಎಂಬುದು ಈ ಕೆಳಗಿನ ಕೃತಿಭಾಗಗಳಿಂದ ಅತ್ಯಂತ ಚೆನ್ನಾಗಿ ಸ್ಪಷ್ಟವಾಗುತ್ತದೆ.

ಒಬ್ಬ ನಿಷ್ಠ ಭಕ್ತಯಾತ್ರಿಕ ಸಪ್ತಗಿರಿಯನ್ನು ಕಾಲ್ನಡಿಗೆಯಲ್ಲಿ ಮೆಟ್ಟಿಲು ಮೆಟ್ಟಲಾಗಿ ಏರಿ ಏರಿ ಮೇಲುಮೇಲಕ್ಕೆ ಸಾಗಿಹೋಗುವಾಗ ಮಾಡುವ ಅನುಸಂಧಾನ - ಚಿಂತನ - ಈ ಕೃತಿಯ ವಾಕ್ಯವೇಷ್ಟನಗಳಲ್ಲಿ ಸ್ಫುಟವಾಗಿ ವ್ಯಕ್ತವಾಗುತ್ತದೆ.

ಜಗದಾದಿ ವಂದ್ಯನಿಗೆ ಶರಣು - ಶರಣು
ಜಗದೊಡೆಯನಿಗೆ ಶರಣು - ಶರಣು
ಪನ್ನಗಾ ನಗದೊಡೆಯ ಶರಣು
ಖಗಪ ನಖಾಗ್ರದಲಿ ಮಿಗೆ ಶೋಭಿಸುವ
ತವಪದನಖಾಗ್ರಕ್ಕೆ ಶರಣು - ಶರಣು
ಮೂಡಲಗಿರಿಗೆ ಶರಣು - ಗಿರಿಯ
ಅಡಿದಾವರೆಗಳಿಗೆ ಶರಣು-ದೃಢಮನದಿ ನಿನ್ನ
ಅಡಿದರುಶನಕೆ ನಡೆವಡಿಗಳಿಗೆ
ಶರಣು-ಶರಣು
ಮೆಟ್ಟು ಮೆಟ್ಟಲಿಗೆ ಶರಣು..............
ಕಷ್ಟಹರಿಸಿ ಮನತುಷ್ಟಿಯನು ತೋರ್ವ
ಬೆಟ್ಟದಂದಕ್ಕೆ ಶರಣು - ಶರಣು
ಸುರಕಿನ್ನರರು ತರುಶಿಲಾಲತಾಕಾರ - ತವ
ಪರಿವಾರಕ್ಕೆಲ್ಲ ಶರಣು -
ಶುಕಪಿಕನಾದ ಝೇಂ
ಕಾರಸ್ವರ ಸರ್ವಶಬ್ದವಾಚ್ಯ
ತವ ಶರಣು - ಶರಣು
ಚೆಲ್ವ ಗಾಳಿ ಗೋಪುರಕ್ಕೆ
ಶರಣು ........ ತಿರುತಿರುಗಿ
ತರುವನು ಕರುವು ಅರಸುವಂತೆ
ತಿರುದಾರಿ ಮೊಣಕಾಲ
ಮುರಿಗೆ ಶರಣು - ಶರಣು
ಪಾವನ ಮೂರುತಿಯನು
ಮಾನಸದಿ ಧೇನಿಸಲು
ಭಾವಶುದ್ಧಿಯನೀವ
ಜೀವೇಶನಿಗೆ ಶರಣು
..........ಶ್ರೀ ಮುಕುಂದನ ದಿವ್ಯ
ಅರಮನೆಯ ಮಹಾದ್ವಾರಕ್ಕೆ
ಶರಣು - ಶರಣು
...... ..ತೀರ್ಥ ಮಹಿಮೋಪೇತ
ಸ್ವಾಮಿ ಪುಷ್ಕರಿಣೀ ತಟ ವಿರಾಜಿತ
ಅಶ್ವತ್ಥ ವೃಕ್ಷರಾಜನಿಗೆ ಶರಣು
ಭೂದೇವಿಯ ರಮಣ ಆದಿ
ಶ್ರೀವರಾಹ ಮೂರುತಿಯ ಶ್ರೀ
ಪಾದಯುಗ್ಮಕ್ಕೆ ಶರಣು........
ದಿವ್ಯ ನಿಲಯದೊಳಿರುವ
ಬಹಿರಾವರಣಕ್ಕೆ ಶರಣು
..........ತೊಟ್ಟಿತೀರ್ಥದಿ
ಸಮಸ್ತ ತೀರ್ಥಂಗಳಿಗೆ
ಶರಣು - ಸುಮನಸರು
ಹೃನ್ಮನದಿ ಧೇನಿಸುವ

ಕಾಂಚನ ವಿಮಾನದಲಿ
ಬೆಳಗುತಿಹ ಶ್ರೀ
ಶ್ರೀನಿವಾಸನಿಗೆ ಶರಣು
ಗುಟ್ಟಾಗಿ ಪಾಲ್ಕುಡಿದು
ಪೆಟ್ಟಿನಾ ನೆವದಲ್ಲಿ
ದೃಷ್ಟಿಗೋಚರನಾದ
ಬೆಟ್ಟದೊಡೆಯನಿಗೆ ಶರಣು
ಇಂದುಮಂಡಲ ಭಾಸ
ಮಂದಸ್ಮಿತ ಸುಂದರಾನಂದ
ಆನನಕೆ ಶರಣು -
ಲೋಲ ವಿಶಾಲ ಫಾಲಕಸ್ತೂರಿ
ತಿಲಕಾಂಕಿತ ಶ್ರೀಲೋಲ ತವ ಶರಣು
..........ಶ್ರೀ ವೇಂಕಟೇಶ ನಿನ್ನ ಶ್ರೀಕಂಠ
ಕೌಸ್ತುಭಾಭರಣಯುಕ್ತ ಕಂಠಕ್ಕೆ ಶರಣು-
ಅಜಭವಾದಿಗಳ ಭುಜಬಲನು
ನೀನು ಭುಜಗಭಾಪುರಿ ಯುಕ್ತ
ತವ ಭುಜಯುಗ್ಮಕ್ಕೆ ಶರಣು -
ಕುಕ್ಷಿಯೊಳು ಬ್ರಹ್ಮಾಂಡ
ಕೋಟಿಯನು ಇಟ್ಟಂಥಾ
ಲಕ್ಷ್ಮೀ ವಕ್ಷಸ್ಥ ಶ್ರೀ ವತ್ಸಕ್ಕೆ ಶರಣು
ಕನಕರತ್ನದ ಹಾರ ಪದ
ಮೌಕ್ತಿಕ ಹಾರ ಕಲ್ಹಾರ ಪುಷ್ಪ
ಮಾಲಾಯುಕ್ತ ತವ ಕುಕ್ಷಿಗೆ
ಶರಣು ಪಟ್ಟೆ ಪೀತಾಂಬರ
ಉತ್ತರೀಯವು ತೋರ
ನೀಳ ತ್ರಿವಳಿಹಾಸ ಭಾವಕ್ಕೆ ಶರಣು
............................
............................
ದಿಟ್ಟಮನವ ತೊಟ್ಟು ಆಟ್ಟುಳಿಯ ಕಳೆದು
ಮೆಟ್ಟು ಮೆಟ್ಟಲನೇರಿ ದಿಟ್ಟಪರೋ ನಿನ್ನ
ಗೋವಿಂದ ನನ್ನ
ಆನಂದದಲ್ಲಿಡೋ ಗೋವಿಂದ

- ಎಂದು ಹರಿದಾಸರು ಏಕಗ್ರೀವರಾಗಿ ಭಕ್ತಿಭಾವಭರಿತರಾಗಿ ಬೇಡುತ್ತಾರೆ.

ಹೀಗೆ ಕರ್ಣಾಟಕದ ನೂರಾರು ಮಂದಿ ಹರಿದಾಸರು ನೂರಾರು ವರ್ಷಗಳಿಂದ ತಿರುಮಲೆಗೆ ತೆರಳಿ ಸಪ್ತಗಿರಿವಾಸಿ ಆನಂದನಿಲಯ ಬ್ರಹ್ಮಾಂಡದೊಡೆಯ ಸಕಲಾಭಿಷ್ಟಪ್ರದಾಯಕ ಶ್ರೀನಿವಾಸನನ್ನು ಬಗೆ ಬಗೆಯಾಗಿ ಕೊಂಡಾಡಿ ಕೃತಾರ್ಥರಾಗಿದ್ದಾರೆ.

★★★★★

# ಶ್ರೀ ಕನಕದಾಸರು

- ಎಂ. ಎ. ಸಿಂಗಮ್ಮ.

ಪುರಂದರದಾಸರ ಸಮಕಾಲೀನರಾಗಿದ್ದ ಕನಕದಾಸರು ಅವರಂತೆಯೇ ಶ್ರೀಮಂತರಾಗಿದ್ದು ಅನಂತರ ವೈರಾಗ್ಯವನ್ನು ಪಡೆದು ಹರಿದಾಸರಾದರು. ಇವರಿಬ್ಬರೂ ವ್ಯಾಸರಾಯಸ್ವಾಮಿಗಳ ಶಿಷ್ಯರಾಗಿದ್ದರು. ಇವರಿಬ್ಬರ ಕವಿತೆಗಳಲ್ಲಿಯೂ, ಮಾತಿನಲ್ಲಿ ಯೂ ಒಂದೇ ರೀತಿಯ ಶೈಲಿಯು ಇದ್ದಿತು. ಕನಕದಾಸರ ಪದಗಳು ಮಾತ್ರ ಬಹಳ ಗೂಢಾರ್ಥವನ್ನು ಹೊಂದಿವೆ.

ಧಾರವಾಡ ಜಿಲ್ಲೆಯಲ್ಲಿರುವ ಬಾಡವೆಂಬ ಗ್ರಾಮದಲ್ಲಿಕುರುಬರ ಬೀರಪ್ಪನೆಂಬುವರಿಗೂ, ಬಚ್ಚಮ್ಮನೆಂಬುವರಿಗೂ ಕನಕದಾಸರು ಮಗನಾಗಿ ಜನಿಸಿದರು. ಇವರ ತಂದೆಯಾದ ಬೀರಪ್ಪನು ಅನೇಕ ರೈತರಿಂದ ಕಂದಾಯವನ್ನು ವಸೂಲು ಮಾಡುವ ಡಣಾಯಕನಾಗಿದ್ದನು. ವಿಜಯ ನಗರದ ಅರಸರಿಗೆ ಆ ಕಂದಾಯದ ಹಣವನ್ನೆಲ್ಲಾ ಕಟ್ಟುವವನೂ, ಸಮಯಬಂದಾಗ ದಂಡನ್ನು ಕಟ್ಟಿಕೊಂಡು ಯುದ್ಧಕ್ಕೆ ಹೊರಡುವ ಚಿಕ್ಕ ಪಾಳೆಯಗಾರನಂತೆ ಇದ್ದನು. ಬೀರಪ್ಪನು ತನ್ನ ಪುತ್ರನಿಗೆ ತನ್ನ ಕುಲದೈವವಾದ ವೆಂಕಟೇಶ್ವರನ, ಹೆಸರನ್ನು ಇಡಬೇಕೆಂದು ಅವನಿಗೆ ತಿಮ್ಮಪ್ಪನೆಂದು ನಾಮಕರಣ ಮಾಡಿದನು. ಚಿಕ್ಕ ವಯಸ್ಸಿನಿಂದಲೇ ತಿಮ್ಮಪ್ಪನು ಶೂರ ರಾಜರುಗಳ ಚರಿತ್ರೆಗಳನ್ನು ಕೇಳುತ್ತಿದ್ದುದರಿಂದ ಅವನು ಒಳ್ಳೆಯ ಶೂರನಾದ ಬೇಟೆಗಾರನಾಗಿ ಪರಾಕ್ರಮಶಾಲಿಯಾದನು. ಇವನ ತಾರುಣ್ಯದಲ್ಲಿಯೇ ಇವನ ತಂದೆಯು ಮೃತನಾದುದರಿಂದ ಅವನ ಡಣಾಯಕತನವು ಇವನಿಗೆ ಲಭಿಸಿತು. ಇವನು ದಕ್ಷತೆಯಿಂದ ತನ್ನ ಕಾರ್ಯಗಳನ್ನೆಲ್ಲಾ ಮಾಡುತ್ತಾ ವಿಜಯನಗರದ ಆಸ್ಥಾನದಲ್ಲಿ ದೊಡ್ಡ ಹುದ್ದೆಯನ್ನು ದೊರಕಿಸಿಕೊಂಡನು. ಇವನ ತಾಯಿಯು ಅವಳು ಇವನ ಅಭ್ಯುದಯವನ್ನು ನೋಡಿ ಸಂತೋಷದಿಂದ ಕಾಲವನ್ನು ಕಳೆಯುತ್ತಿದ್ದಳು.

ತಿಮ್ಮಪ್ಪನು ಭೂಮಿಯನ್ನು ಅಗೆದು ಹದಗೊಳಿಸುತ್ತಿದ್ದಾಗ ಭೂಮಿಯಲ್ಲಿ ಕನಕರಾಶಿಯು ಇವನಿಗೆ ದೊರಕಿತು. ಇದನ್ನು ತಿಳಿದ ಇತರ ಜನರು ಇವನ ಅದೃಷ್ಟವನ್ನು ಕೊಂಡಾಡುತ್ತಾ ಇವನನ್ನು ಕನಕನಾಯಕನೆಂದು ಕರೆದರು. ಕನಕನು ತನಗೆ ದೊರೆತ ದ್ರವ್ಯದಿಂದ ಕಾಗಿನೆಲೆಯಲ್ಲಿ ಒಂದು ದೊಡ್ಡ ದೇವಾಲಯವನ್ನು ಕಟ್ಟಿಸಿ ಅಲ್ಲಿ ಆದಿಕೇಶವಮೂರ್ತಿಯನ್ನು ತಂದು ಪ್ರತಿಷ್ಠಾಪಿಸಿ ಅಲ್ಲಿ ತಿರುಪತಿಯಲ್ಲಿ ನಡೆಯುವ ಪೂಜಾಪದ್ಧತಿಗಳನ್ನು ಏರ್ಪಾಡು ಮಾಡಿದನು. ಕನಕನಾಯಕನ ವ್ಯಕ್ತಿತ್ವದಿಂದಲೂ ಅವನ ದಕ್ಷತೆಯಿಂದಲೂ, ಅಲ್ಲದೆ ಅವನೇ ಸ್ವಂತವಾಗಿ ನಿಂತು ನಡೆಸುವ ದೇವತಾ ಉತ್ಸವಗಳ ಪ್ರಭಾವದಿಂದಲೂ ಕಾಗಿನೆಲೆಯು ಉತ್ತರ ಕರ್ನಾಟಕದಲ್ಲಿನ ತಿರುಪತಿಯಂತೆ



ಪ್ರಸಿದ್ಧಿಯನ್ನು ಪಡೆಯಿತು. ಕನಕನಾಯಕನಿಗೆ ದೇವಾಲಯವನ್ನು ಕಟ್ಟಿಸಿ ಆದಿಕೇಶವ ಮೂರ್ತಿಯನ್ನು ಅಲ್ಲಿ ಪ್ರತಿಷ್ಠಿಸಿದ ಮೇಲೆ ಸಾಮಾನ್ಯ ಆಡಳಿತದಲ್ಲಿ, ರಾಜಕಾರಣದಲ್ಲಿ ತನ್ನ ಎಲ್ಲ ಕಾಲವನ್ನೂ ವ್ಯಯ ಮಾಡತೊಡಗಿದನು.

ಹೀಗೆಯೇ ಇರಲು ಬಂದು ದಿವಸ ರಾತ್ರಿ ಕನಸಿನಲ್ಲಿ ಕನಕನಿಗೆ ಭಗವಂತನು ತನ್ನ ದಾಸನಾಗುವಂತೆ ಹೇಳಿದಂತೆ ಭಾಸವಾಯಿತು. ಆದರೆ ಅವನಲ್ಲಿಯಾವಾಗಲೂ ದೊರೆತನವನ್ನು ಮಾಡುವ ಕೃಷಿಯು ಇದ್ದಿತೇ ಹೊರತು ದಾಸನಾಗುವ ಆಸೆಯು ಸ್ವಲ್ಪವೂ ಇರಲಿಲ್ಲವಾದ್ದರಿಂದ ಅವನು ಭಗವಂತನ ನಿಯಮನವನ್ನು ಲಕ್ಷ್ಯಕ್ಕೇ ತೆಗೆದುಕೊಳ್ಳಲಿಲ್ಲ. ಆದರೆ ಆದಿಕೇಶವನ ದೇವಸ್ಥಾನದಲ್ಲಿ ಪೂಜೆಯನ್ನು ಮಾತ್ರ ಮಾಡಿಸಿದನು. ತನ್ನ ತಾಯಿಗೂ ಭಗವಂತನ ನಿಯಮನವನ್ನು ತಿಳಿಸಿದನು. ಸ್ವಲ್ಪ ದಿವಸವಾದ ನಂತರ ಅವನಿಗೆ ಇದ್ದಕ್ಕಿದ್ದಂತೆ ಪತ್ನಿಯ ವಿಯೋಗ ವಾಯಿತು. ಆ ಆಘಾತದಿಂದ ಅವನು ಚೇತರಿಸಿ ಕೊಳ್ಳುವಷ್ಟರಲ್ಲಿಯೇ ಅವನ ತಾಯಿಯು ಮೃತಳಾಗಲು ಅವನು ಬಹಳ ಕಷ್ಟ ಪಡಬೇಕಾಯಿತು. ಅನಂತರ ಅವನಿಗೆ ಮನಸ್ಸಿನಲ್ಲಿ ಜಿಹಾಸೆಯೂ, ಜೀವನದಲ್ಲಿ ಉದಾಸೀನಭಾವವೂ ತಲೆದೋರಿ ವೈರಾಗ್ಯವು ಉಂಟಾಯಿತು. ಮತ್ತೆ ಅವನನ್ನು ಭಗವಂತನು ಕನಸಿನಲ್ಲಿ ಹರಿದಾಸನಾಗುವಂತೆ ನಿಯ ಮಿಸಿದರೂ ಅವನು ಅದನ್ನು ಲಕ್ಷ್ಯಮಾಡದೆ ತಾನು ಎಂದಿಗೂ ಹರಿದಾಸನಾಗುವುದಿಲ್ಲ ಎಂಬ ಹಠದಲ್ಲಿಯೇ ಇದ್ದನು. ಹೀಗೆಯೇ ಕೆಲವು ಕಾಲ ಕಳೆಯಿತು.

ಕಾಲಾಂತರದಲ್ಲಿ ಕನಕನು ಬಿಲ್ಲು ಬಾಣಗಳಿಂದ ಸಜ್ಜಾಗಿದ್ದ ಕುದುರೆಯ ರಾವುತರ ಜೊತೆಯಲ್ಲಿ ಯುದ್ಧವನ್ನು ಮಾಡಬೇಕಾದ ಪ್ರಸಂಗವು ಒದಗಿತು. ಇವನು ಪಾದಚಾರಿ ಯಾಗಿ ಖಡ್ಗಪಾಣಿಯಾಗಿ ಅವರೊಂದಿಗೆ ಯುದ್ಧ ಮಾಡಿದನು. ಆದರೆ ಶತ್ರುಗಳ ಬಲವು ಹೆಚ್ಚಾಗಿದ್ದುದರಿಂದ ಅವನ ಮೈಯಲ್ಲೆಲ್ಲಾ ಬಾಣವು ನಾಟಿಕೊಂಡು ಅವನು ಆ ನೋವಿನ ಬಾಧೆಯನ್ನು ತಡೆಯಲಾರದೆ ''ಕೇಶವಾ'' ಎಂದು ಭಗವಂತನನ್ನು ಕೂಗಿಕೊಳ್ಳುತ್ತಾ ಸ್ಮೃತಿ ತಪ್ಪಿ ನೆಲದ ಮೇಲೆ ಬಿದ್ದುಬಿಟ್ಟನು. ಇವನ ಪ್ರಾರ್ಥನೆಯು, ಭಗವಂತನಿಗೆ ಕೇಳಿಸಲು ಅವನು ತಕ್ಷಣವೇ ಮಾನವವೇಷದಾರಿಯಾಗಿ ಬಂದು ಇವನಿಗೆ ಉಪಚರಿಸಿದನು ಮತ್ತು ಇವನು ಎಚ್ಚರಗೊಂಡಮೇಲೆ ಇವನ ಬಾಧೆಗಳನ್ನೆಲ್ಲಾ ನಿವಾರಿಸಿ ಭಗವಂತನು ಶಂಖಚಕ್ರಗಧಾ ಪಾಣಿಯಾಗಿಯೂ, ಪೀತಾಂಬರ ಧಾರಿ ಯಾಗಿಯೂ ಅವನಿಗೆ ತನ್ನ ದರ್ಶನವನ್ನು ದಯಪಾಲಿಸಿದನು. ಭಗವಂತನ ದರ್ಶನವನ್ನು ಪಡೆದ ಕನಕನು ಪುಳಕಾಂಕಿತನಾಗಿ ಭಗವಂತನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಅವನನ್ನು ಭಕ್ತಿಯಿಂದ ಸ್ತುತಿಸಿದನು. ಅಂದಿನಿಂದಲೇ ಅವನ ಮನಸ್ಸಿನಲ್ಲಿದ್ದ ದೊರೆತನದ ಹುಚ್ಚು ಮಾಯವಾಗಿ ಅವನ ಮನಸ್ಸು ಪರಿವರ್ತನೆಯನ್ನು ಹೊಂದಿ ಹರಿದಾಸನಾಗಲು ನಿಶ್ಚಯಿಸಿದನು. ತನ್ನ ಕೈಕೆಳಗೆ ಇರುವವರನ್ನೆಲ್ಲಾ ಕರೆದು ಅವರಿಗೆ ತನ್ನ ಅಧಿಕಾರವನ್ನೆಲ್ಲಾ ವಹಿಸಿಬಿಟ್ಟು ತಾನು ತನ್ನ ಏಕತಾರೆಯನ್ನು ತೆಗೆದುಕೊಂಡು ದೇವಾಲಯಕ್ಕೆ ಹೋಗಿ ಭಗವಂತನಿಗೆ ಅಧೀನನಾಗಿ ಅವನ ದಾಸನಾದನು.

ಕನಕನಲ್ಲಿ ಮನಸ್ಸಿನ ಭಕ್ತಿರಸವು ಉಕ್ಕಿ ಬರಲು ಅವನು ಈ ಕೆಳಗಿನ ಕೀರ್ತನೆಯನ್ನು ಹಾಡುತ್ತಾ ಭಗವಂತನ ಭಜನೆಯನ್ನು ಮಾಡುತ್ತಿದ್ದನು.

**ಪದ - ರೂಪಕ**

ಈಶ ನಿನ್ನ ಚರಣ ಭಜನೆ
ಆಶೆಯಿಂದ ಮಾಡುವೆನು
ದೋಷರಾಶಿ ನಾಶಮಾಡು
ಶ್ರೀಶ ಕೇಶವ ॥ ಪ ॥

ಶರಣು ಹೊಕ್ಕೆನಯ್ಯ ಎನ್ನ
ಮರಣ ಸಮಯದಲ್ಲಿ ನಿನ್ನ
ಚರಣಸ್ಮರಣೆ ಕರುಣಿಸಯ್ಯ
ನಾರಾಯಣ ॥ 1 ॥

ಶೋದಿಸೆನ್ನ ಭವದಕಲುಷ
ಬೋಧಿಸಯ್ಯ ಜ್ಞಾನವೆನಗೆ
ಬಾಧಿಸುವ ಯಮನ ಬಾಧೆ
ಬಿಡಿಸು ಮಾಧವ ॥ 2 ॥

ಹಿಂದನೇಕ ಯೋನಿಗಳಲಿ
ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸು
ತಂದೆ ಗೋವಿಂದ ॥ 3 ॥

ಭ್ರಷ್ಟನೆನಿಸಬೇಡ ಕೃಷ್ಣ
ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಡನೆ ಇಟ್ಟು ಕಷ್ಟ
ಬಿಡಿಸು ವಿಷ್ಣುವೆ ॥ 4 ॥

ಮೊದಲು ನಿನ್ನ ಪಾದ ಪೂಜೆ
ಮುದದಿ ಮಾಡುವೆನು ನಾನು
ಹೃದಯ ದೊಳಗೆ ಹುದುಗಿ ಸಯ್ಯ
ಮಧುಸೂದನ ॥ 5 ॥

ಕವಿದುಕೊಂಡು ಇರುವ ಪಾಪ
ಸವೆದು ಪೋಗುವಂತೆ ಮಾಡಿ
ಜವನ ಬಾಧೆಯನ್ನು ಬಿಡಿಸು
ತ್ರಿವಿಕ್ರಮ ॥ 6 ॥

ಕಾಮ ಜನಕ ನಿನ್ನ ನಾಮ
ಪ್ರೇಮದಿಂದ ಪಾಡುವಂಥ
ನೇಮವೆನಗೆ ಪಾಲಿಸಯ್ಯ
ಸ್ವಾಮಿ ವಾಮನ ॥ 7 ॥

ಮದನನಯ್ಯ ನಿನ್ನ ಮಹಿಮೆ
ವದನದಲ್ಲಿ ಇರುವಂತೆ
ಹೃದಯದಲ್ಲಿ ಸದನ ಮಾಡು
ಮುದದಿ ಶ್ರೀದರ ॥ 8 ॥

ಹುಸಿಯನಾಡಿ ಹೊಟ್ಟೆ ಹೊರೆವ
ವಿಷಯದಲ್ಲಿ ರಸಿಕನೆಂದು
ಹುಸಿಗೆ ಹಾಕದಿರಯ್ಯ
ಹೃಷೀಕೇಶನೆ ॥ 9 ॥

ಬಿದ್ದು ಭವದನೇಕ ಜನುಮ
ಬದ್ಧನಾಗಿ ಕಲುಷದಿಂದ
ಗೆದ್ದು ಪೋಪ ಬುದ್ಧಿ ತೋರೋ
ಪದ್ಮನಾಭನೆ ॥ 10 ॥

ಕಾಮ ಕ್ರೋಧ ಬಿಡಿಸಿ ನಿನ್ನ
ನಾಮ ಜಿಹ್ವೆ ಯೊಳಗೆ ನುಡಿಸು
ಶ್ರೀ ಮಹಾನುಭಾವ ನಾದ
ದಾಮೋದರ ॥ 11 ॥

ಪಂಕಜಾಕ್ಷ ನೀನು ಎನ್ನ
ಮಂಕು ಬುದ್ಧಿ ಬಿಡಿಸಿ ನಿನ್ನ
ಕಿಂಕರನ್ನ ಮಾಡಿ ಕೊಳ್ಳೋ
ಸಂಕರುಷಣ ॥ 12 ॥



ಮಂಕು ಬುದ್ಧಿ ಬಿಡಿಸಿ ಕಾಯೊ ಸಂಕರ್ಷಣ.

ಏಸು ಜನ್ಮ ಬಂದರೇನು
ದಾಸನಲ್ಲವೇನೋ ನಾನು
ಘಾಸಿಮಾಡದಿರು ಎನ್ನ
ವಾಸುದೇವನೆ ॥ 13 ॥

ಬುದ್ಧಿ ಶೂನ್ಯ ನಾಗಿ ಎನ್ನ
ಪದ್ಧ ಕಾರ್ಯ ಕುಹಕಮನವ
ತಿದ್ದಿ ಹೃದಯ ಶುದ್ಧಿ ಮಾಡೋ
ಪ್ರದ್ಯುಮ್ನನೆ ॥ 14 ॥

ಜನನಿ ಜನಕ ನೀನೆ ಎಂದು
ನೆನೆವ ನಯ್ಯ ದೀನ ಬಂಧು
ಎನಗೆ ಮುಕ್ತಿ ಪಾಲಿಸೆಂದು
ಅನಿರುದ್ಧನೆ ॥ 15 ॥

ಹರುಷದಿಂದ ನಿನ್ನ ನಾಮ
ಸ್ಮರಿಸುವಂತೆ ಮಾಡು ನಿತ್ಯ
ವಿರಿಸು ಚರಣದಲ್ಲಿ ಪ್ರೇಮ
ಪುರುಷೋತ್ತಮ ॥ 16 ॥

ಸಾಧು ಸಂಗಕೊಟ್ಟು ನಿನ್ನ
ಪಾದ ಭಜನೆಯಿತ್ತು ಎನ್ನ
ಭೇದ ಮಾಡಿ ನೋಡದಿರು
ಅ-ಧೋಕ್ಷಜ ॥ 17 ॥

ಚಾರು ಚರಣ ತೋರಿ ಎನಗೆ
ಪಾರುಗಾಣಿಸಯ್ಯ ಕೊನೆಗೆ
ಭಾರ ಹಾಕಿರುವೆ ನಿನಗೆ
ನಾರಸಿಂಹನೆ ॥ 18 ॥

ಸಂಚಿತಾರ್ಥಪಾಪಗಳು
ಕಿಂಚಿತಾದ ಪೀಡೆಗಳು
ಮುಂಚಿತಾಗಿ ಕಳೆದು ಪೊರೆಯೊ
ಸ್ವಾಮಿ ಅಚ್ಯುತ ॥ 19 ॥

ಜ್ಞಾನ ಭಕ್ತಿ ಕೊಟ್ಟು ನಿನ್ನ
ಧ್ಯಾನದಲ್ಲಿ ಇಟ್ಟು ಸದಾ
ಹೀನ ಬುದ್ಧಿ ಬಿಡಿಸು ಮುನ್ನ
ಜನಾರ್ದನ ॥ 20 ॥

ಜಪತಪಾನುಷ್ಠಾನ ವಿಲ್ಲ
ಕುಪಥಗಾಮಿಯಾದ ಎನ್ನ
ಕೃಪೆಯ ಮಾಡಿ ಕ್ಷಮಿಸಬೇಕು
ಉಪೇಂದ್ರನೆ ॥ 21 ॥

ಮೊರೆಯ ಇಡುವೆ ನಿನಗೆ
ಶರಧಿಶಯನ ಶುಭಮತಿಯ
ಇರಿಸೊ ಭಕ್ತನೆಂದು ಪರಮ
ಪುರುಷ ಶ್ರೀಹರೇ ॥ 22 ॥

ಪುಟ್ಟಿಸಲು ಬೇಡ ಮುಂದೆ
ಪುಟ್ಟಿಸಿದಕೆ ಪಾಲಿಸು ಎನ್ನ
ಇಷ್ಟೇ ಬೇಡಿಕೊಂಬೆ ನಾನು
ಶ್ರೀಕೃಷ್ಣನೇ ॥ 23 ॥

ಸತ್ಯವಾದೀ ನಾಮಗಳನು
ನಿತ್ಯದಲ್ಲಿ ಪಠಿಸುವರನು
ಅರ್ಥಿಯಿಂದ ಸಲಹಲೆಮ್ಮ
ಕರ್ತೃ ಕೇಶವ ॥ 24 ॥

ಮರೆಯದಲೆ ಹರಿಯ ನಾಮ
ಬರೆದು ಓದಿ ಕೇಳಿದರ್ಗೆ
ಕರೆದು ಮುಕ್ತಿಯ ಕೊಡುವ
ನೆಲೆಯಾದಿ ಕೇಶವ ॥ 25 ॥

ಕನಕನ ಭಜನೆಯನ್ನು ಕೇಳಿ ಅವನ ಆಳುಗಳಿಗೆಲ್ಲಾ ಬಹಳ ಆಶ್ಚರ್ಯವಾಗಲು ಕನಕನು ಅವರನ್ನೆಲ್ಲಾ ಹತ್ತಿರಕ್ಕೆ ಕರೆದು ತಾನು ಅವರಿಗೆಲ್ಲಾ ಮುಂದೆ ಯಜಮಾನನಲ್ಲ ವೆಂಬುದನ್ನು ತಿಳಿಸಿದನು. ಅಲ್ಲದೆ ತಾನು ಈಗ ಹರಿದಾಸನಾಗಿರುವುದರಿಂದ ಇನ್ನು ಮೇಲೆ ಎಲ್ಲರನ್ನು ಶಿಕ್ಷಿಸುವವನು ಭಗವಂತನಾದ ಕೇಶವನೊಬ್ಬನೆ ಎಂದೂ, ಅದರಿಂದ ಯಾರೂ ತನ್ನನ್ನು ನೋಡಿ ಭಯಪಡಬೇಕಾಗಿಲ್ಲ ವೆಂಬುದನ್ನೂ ತಿಳಿಸಿದನು.

ಕನಕನಿಗೆ ಮತ್ತೆ ಸ್ವಪ್ನ ಮುಖೇನ ಭಗವಂತನಿಂದ ಅವನು ವ್ಯಾಸರಾಯರ ಶಿಷ್ಯನಾಗಬೇಕೆಂಬ ನಿಯಮನವಾಯಿತು. ಆದ್ದರಿಂದ ಆತ ಮದನಪಲ್ಲಿಯಲ್ಲಿ ವ್ಯಾಸ ಸಮುದ್ರವನ್ನು ಕಟ್ಟಿಸುತ್ತಿದ್ದ ವ್ಯಾಸರಾಯರ ಬಳಿಗೆ ಬಂದು ತನಗೆ ಮಂತ್ರೋಪದೇಶ ಮಾಡಬೇಕೆಂದು ಅವರನ್ನು ಪ್ರಾರ್ಥಿಸಿದನು. ಆದರೆ ಅವರು ಕುರುಬನಾದ ಅವನಿಗೆ ಕೋಣನ ಮಂತ್ರವನ್ನು ಜಪಿಸುವಂತೆ ಹೇಳಿ ಪರಿಹಾಸ್ಯ ಮಾಡಿದರು. ಅವರು ಹೇಳಿದುದು ನಿಜವೆಂದೇ ಭಾವಿಸಿ ಮರದನೆರಳಿನಲ್ಲಿ ಕುಳಿತು ಕೋಣ ಮಂತ್ರವನ್ನು ಜಪಿಸಿದನು. ದೈವಾನುಗ್ರಹದಿಂದ ಯಮದೇವರ ಕೋಣನೇ ಅವನ ಎದುರಿನಲ್ಲಿ ಬಂದು ನಿಂತಿತು. ಅವನು ಸ್ವಾಮಿಗಳಿಗೆ ಕೋಣನು ಪ್ರತ್ಯಕ್ಷವಾಗಿರುವುದನ್ನು ತಿಳಿಸಲು ಅವರು ಅವರ ಸಮುದ್ರದ ಸುತ್ತಲೂ ಪರ್ವತಾಕಾರವಾಗಿ ನಿಂತಿದ್ದ ದೊಡ್ಡ ದೊಡ್ಡ ಬಂಡೆಗಳನ್ನೆಲ್ಲಾ ಅದರ ಸಹಾಯದಿಂದ ತೆಗೆಸುವಂತೆ ಹೇಳಿದರು. ಕನಕನು ಅವರು ಹೇಳಿದಂತೆ ಎಲ್ಲ ಬಂಡೆಗಳನ್ನೂ ಕೋಣನಿಂದ ತೆಗೆಸಲು ಸ್ವಾಮಿಗಳು ಅಲ್ಲಿ ಹನ್ನೆರಡು ಕ್ಷೇತ್ರ ಸಾಲಿಗ್ರಾಮಗಳನ್ನು ಸ್ಥಾಪಿಸಿದರು. ಕನಕನ ಯೋಗ್ಯತೆಯನ್ನು ಮೆಚ್ಚಿದ ಸ್ವಾಮಿಗಳು ಅವನಿಗೆ ಮಂತ್ರೋಪದೇಶವನ್ನು ಮಾಡಿ ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ ಅವನನ್ನು ಕನಕದಾಸ ನೆಂದು ಕರೆದರು.

ಭಕ್ತಿಪಂಥದಲ್ಲಿ ಜಾತಿಮತಗಳಿಗೆ ಸ್ಥಾನ ಇಲ್ಲ, ಸ್ತ್ರೀ ಪುರುಷರೆಂಬ ಭೇದ ಇಲ್ಲ ಮತ್ತು ಭಕ್ತರು ಇಂತಹ ವರ್ಣದಲ್ಲಿಯೇ ಜನ್ಮ ತಾಳಬೇಕೆಂಬ ನಿಯಮವಿಲ್ಲ. ಭಕ್ತಿಗೆ ಶಾಶ್ವತ ಮುಕ್ತಿಯೇ ಫಲವಾಗಿರುತ್ತದೆ. ಹಿಂದೆ ಭಗವಂತನಾದ ಶ್ರೀಕೃಷ್ಣನು ದನವನ್ನು ಕಾಯುವ ಗೊಲ್ಲ ಗೊಲ್ಲತಿಯರ ಮಧ್ಯದಲ್ಲಿಯೇ ಬೆಳೆದನು. ಅಂತೆಯೇ ಕುರುಬಜಾತಿಯಲ್ಲಿ ಅವತರಿಸಿದ ಕನಕದಾಸರು ಸಾಮಾನ್ಯ ಮನುಷ್ಯರಾಗಿರ ಲಿಲ್ಲವಾದ್ದರಿಂದ ಪರಮಾತ್ಮನು ಅವರನ್ನು ಹರಿದಾಸರನ್ನಾಗಿ ಪರಿವರ್ತಿಸಿದನು. ಹರಿದಾಸರಾದ ಕನಕದಾಸರು ವ್ಯಾಸರಾಯ ರೊಂದಿಗೆ ತಾವೂ ಸೇರಿ ಕನ್ನಡದಲ್ಲಿ ಭಜನೆ ಮಾಡಲು ಆರಂಭಿಸಿದರು. ಆದರೆ ಮಠದ ಜನರಿಗೆ ಸ್ವಾಮಿಗಳು ಕನಕದಾಸ ರೊಂದಿಗೆ ಕನ್ನಡ ದೇವರನಾಮಗಳನ್ನು ಹಾಡುವುದು ಸಹ್ಯವಾಗದೇ ಅವರುಗಳು ಹೇಗಾದರೂ ಮಾಡಿ ಕನಕದಾಸರನ್ನು ಮಠದಿಂದ ಆಚೆಗೆ ಹೊರಡಿಸಲು ಪ್ರಯತ್ನಿಸುತ್ತಿದ್ದರು. ವ್ಯಾಸ ರಾಯಸ್ವಾಮಿಗಳಿಗೆ ಈ ವಿಷಯವು ತಿಳಿದಿದ್ದರೂ ಅವರು ಏನೂ ತಿಳಿಯದವರಂತೆ ಸುಮ್ಮನೆಯೇ ಇದ್ದರು.

ಒಂದು ದಿನ ವಿದ್ವದ್ಗೋಷ್ಠಿಯಲ್ಲಿ ಸ್ವಾಮಿಗಳವರು "ಅಲ್ಲಿ ನೆರೆದಿರುವ ಜನರಲ್ಲಿ ವೈಕುಂಠಕ್ಕೆ ಹೋಗುವವರು ಯಾರು" ಎಂಬ ಪ್ರಶ್ನೆಯನ್ನು ಸಭೆಯಲ್ಲಿದ್ದವರೆಲ್ಲರ ಮುಂದ ಇಟ್ಟರು. ಅಲ್ಲಿ ನೆರೆದಿದ್ದ ಪಂಡಿತೋತ್ತಮರಿಗೆ ಈ ವಿಷಯವನ್ನು ನಿರ್ಧರಿಸುವುದು ಕಷ್ಟಸಾಧ್ಯ ವಾಗಿದ್ದುದರಿಂದ ಯಾರಿಗೂ ಇದಕ್ಕೆ ಉತ್ತರವನ್ನು ಹೇಳಲು ಧೈರ್ಯವಿರಲಿಲ್ಲ. ಆದರಿಂದ ಎಲ್ಲರೂ

ಏನೂ ಹೇಳದೆ ತಟಸ್ಥರಾಗಿ ಸುಮ್ಮನೆ ಕುಳಿತಿದ್ದರು. ಕಡೆಗೆ ಸ್ವಾಮಿಗಳು ಕನಕನನ್ನು ಉದ್ದೇಶಿಸಿ 'ಅಲ್ಲಿದ್ದ ಜನರಲ್ಲಿ ಯಾರು ವೈಕುಂಠಕ್ಕೆ ಹೋಗಲು ಅರ್ಹರು' ಎಂಬುದನ್ನು ತಿಳಿಸುವಂತೆ ಕೇಳಿದರು. ಅಲ್ಲದೆ ಅಲ್ಲಿ ನೆರೆದಿದ್ದ ಪಂಡಿತರೆಲ್ಲರ ಪರಿಚಯವನ್ನು ಕನಕನಿಗೆ ಮಾಡಿದರು. ಆದರೆ ಕನಕನು ಅಲ್ಲಿ ನೆರೆದಿದ್ದ ಪಂಡಿತರಲ್ಲಿ ಯಾರೂ ವೈಕುಂಠಕ್ಕೆ ಹೋಗುವುದಿಲ್ಲವೆಂದು ತಿಳಿಸಿದನು. ಆಗ ಸ್ವಾಮಿಗಳು ಕನಕನನ್ನೇ ಉದ್ದೇಶಿಸಿ ಮತ್ತೆ ಯಾರು ವೈಕುಂಠಕ್ಕೆ ಹೋಗಲು ಅರ್ಹರು ಎಂದು ತಿಳಿಸುವಂತೆ ಕೇಳಿದರು. ಆಗ ಕನಕನು ''ನಾನು ಹೋದರೆ ಹೋದೇನು'' ಎಂದು ಉತ್ತರವನ್ನು ಕೊಟ್ಟನು. ಇದನ್ನು ಕೇಳಿದ ಅಲ್ಲಿ ನೆರೆದಿದ್ದ ಪಂಡಿತರಿಗೆಲ್ಲಾ ಬಹಳ ಕೋಪವೂ ಅಸಮಾಧಾನವೂ ಉಂಟಾಯಿತು. ಎಲ್ಲಾ ಕೂಗಾಡಿದಾಗ ಕನಕನು ಮನುಷ್ಯರಲ್ಲಿರುವ ''ನಾನು'' ಎಂಬ ಅಹಂಕಾರದಿಂದ ಕೂಡಿದ ಅಹಂಭಾವವು ಹೋದಾಗ ಮಾತ್ರ ಅವರು ವೈಕುಂಠಕ್ಕೆ ಹೋಗುತ್ತಾರೆ ಎಂಬ ಗೂಢವಾದ ಅರ್ಥವನ್ನು ಎಲ್ಲರಿಗೂ ತಿಳಿಸಲು ಪಂಡಿತರೆಲ್ಲರೂ ಆಶ್ಚರ್ಯವನ್ನು ಹೊಂದಿ ಕನಕನ ಮಾತಿಗೆ ಸಮ್ಮತಿಸಿ ಆತನನ್ನು ಹೊಗಳಿದರು.

ಕನಕದಾಸರಿಗೆ ಭಗವಂತನಲ್ಲಿ ಹೆಚ್ಚಾದ ಭಕ್ತಿಯಿದ್ದುದರಿಂದ ಭಗವಂತನು ಇವರು ಸ್ಮರಿಸಿದ ತಕ್ಷಣ ಇವರಿಗೆ ಒಲಿಯುತ್ತಿದ್ದನು. ಒಮ್ಮೆ ಸಭೆಯಲ್ಲಿ ವ್ಯಾಸರಾಯರು ಕನಕದಾಸರನ್ನು ಕರೆದು ಎಲ್ಲರಿಗೂ ಪರಮಾತ್ಮನ ದರ್ಶನವನ್ನು ಮಾಡಿಸುವಂತೆ ಹೇಳಿದರು. ಅದಕ್ಕೆ ಕನಕದಾಸರು ಸಮ್ಮತಿಸಿ ಪರಮಾತ್ಮನನ್ನು ಮಾರನೆಯ ದಿನ ಪೂಜಾಕಾಲದಲ್ಲಿ ಭೈರವರೂಪದಿಂದ ಬಂದು ಎಲ್ಲರಿಗೂ ದರ್ಶನವನ್ನು ದಯಪಾಲಿಸುವಂತೆ ಪ್ರಾರ್ಥಿಸಿದರು. ಅಂತೆಯೇ ಪರಮಾತ್ಮನು ಮಾರನೆಯದಿನ ನಾಯಿಯ ರೂಪದಲ್ಲಿ ದೇವಾಲಯದ ಗುಂಪಿನಲ್ಲಿ ನುಗ್ಗಲು ಜನರೆಲ್ಲ ಸೇರಿ ಪರಮಾತ್ಮನು ನಾಯಿಯ ರೂಪದಲ್ಲಿ ಬಂದಿರುವುದನ್ನು ತಿಳಿಯದೆ ಆ ನಾಯಿಯನ್ನು ಹೊಡೆದು ಓಡಿಸಿದರು. ಮತ್ತೆ ಸ್ವಾಮಿಯವರ ಆದೇಶದಂತೆ ಕನಕದಾಸನು ಪರಮಾತ್ಮನನ್ನು ಹಾವಿನ ರೂಪದಲ್ಲಿ ಮಾರನೆಯದಿನ ಬಂದು ಎಲ್ಲರಿಗೂ ದರ್ಶನವನ್ನು ದಯಪಾಲಿಸುವಂತೆ ಪ್ರಾರ್ಥಿಸಲು ಅಂತೆಯೇ ಪರಮಾತ್ಮನು ಹಾವಿನ ರೂಪದಲ್ಲಿ ಬಂದನು. ಆದರೆ ಆಗಲೂ ಪಂಡಿತರಿಗೆ ಭಗವಂತನು ಬಂದಿರುವುದು ತಿಳಿಯದೆ ಹಾವೆಂದು ಭಯಪಟ್ಟು ಎಲ್ಲರೂ ಅಲ್ಲಿಂದ ಓಡಿಹೋದರು. ಪಂಡಿತರ ಅಜ್ಞಾನದಿಂದ ಅವರಿಗೆ ನಾಯಿಯರೂಪ ದಲ್ಲಿಯೂ, ಹಾವಿನ ರೂಪದಲ್ಲಿಯೂ ಬಂದಿದ್ದ ಪರಮಾತ್ಮನ ದರ್ಶನವಾಗಲಿಲ್ಲ. ಆದರೆ ಸ್ವಾಮಿಗಳು ಮಾತ್ರ ತಮ್ಮ ದಿವ್ಯಜ್ಞಾನದಿಂದ ಭಗವಂತನ ಆಗಮನವನ್ನು ಅರಿತು ಪೂಜಿಸಿ ಕ್ಷೀರವನ್ನು ನೈವೇದ್ಯ ಮಾಡಿ ಅರ್ಪಿಸಿ ಕೃತಾರ್ಥರಾದರು. ಕನಕದಾಸನಿಗೂ ಭಗವಂತನ ದರ್ಶನದಿಂದ ಬಹಳ ಸಂತೋಷವಾಗಿ ಒಂದು ದೇವರ ನಾಮವನ್ನು ಹಾಡಿ ಭಜಿಸಿದನು. ಜನಗಳೂ ಈ ದೃಶ್ಯವನ್ನು ನೋಡಿ ಸಂತೋಷದಿಂದಲೂ, ಭಕ್ತಿಯಿಂದಲೂ ಕೈಮುಗಿದರು. ಪಂತುವರಾಳಿ - ರೂಪಕತಾಳ.

ಈತನೀಗ ವಾಸುದೇವನು
ಈ ಸಮಸ್ತ ಜಗಕಧೀಶ ॥ಪ॥
ಈತ ನೀಗ ವಾಸುದೇವ
ಈ ಸಮಸ್ತ ಜಗಕಧೀಶ
ದೂತಗೊಲಿದು ತೇರ ತೇಜಿ
ಗಳನು ಪಿಡಿದು ನಡೆಸಿದಾತ ॥ಅ.ಪ॥
ದನುಜೆ ಯಾಳಿದ ನಣ್ಣನಣ್ಣನ
ಪಿತನಮರೆಸಿ ಕೌರವೇಂದ್ರ
ನನುಜೆ ಯಾಳಿದವನ
ಶಿರವ ಛೇದಿಸೀ
ತನ್ನನುಜೆ ಯಾಳಿದವನ
ಬೆಂಕಿ ಮುಟ್ಟದಂತೆ
ಕಾಯ್ದು ರುಗ್ಮನನುಜೆ
ಯಾಳಿದವನ ನೋಡಿರೋ ರಂಗನು ॥ಪ॥
ಕ್ರೂರವಾದ ಗರಳ ಮುಖದಿ
ಭೂರಿಭಟರೊಳದಿಕ ಅಸಮ
ವೀರನೆಚ್ಚ ಬಪ್ಪಶರವನೂ
ಈಕ್ಷಿಸಿ ಧಾರುಣಿಯ ಚರಣ
ತಳದೊಳೊತ್ತಿ ನರನ ತಲೆಯ ಕಾಯ್ದ
ಭಾರ ಭರಿತ ಭಾರಕರ್ತನೂ ರಂಗನು ॥2॥
ವ್ಯೋಮಕೇಶನಿಪ್ಪ ದೆಶೆಯನಾಂತು
ಪೊತ್ತ ಪ್ರಾಣವುಳ್ಳ
ಸಾಮಜವನೇರಿ ಬಪ್ಪನ ಶಕ್ತಿಗೆ
ಪ್ರೇಮದಿಂದ ಉರವ
ನಾಂತು ಡಿಂಗರಿನನ್ನು ಕಾಯ್ದ
ಸಾರ್ವಭೌಮ ಬಾಡದಾದಿ
ಕೇಶವರಾಯನ ರಂಗನು ॥3॥

ಈ ರೀತಿಯಾದ ವಿಚಿತ್ರವ್ಯಾಪಾರಗಳನ್ನೆಲ್ಲಾ ನೋಡಿದ ಪಂಡಿತರು ಕನಕದಾಸರ ವ್ಯಕ್ತಿತ್ವವನ್ನೂ ಅವರ ಜ್ಞಾನವನ್ನೂ ತಿಳಿದುಕೊಂಡು ಅವರಲ್ಲಿ ಪೂಜ್ಯ ಭಾವನೆಯನ್ನು ಹೊಂದಿದರು. ಕನಕದಾಸರು ತಮ್ಮ ಜಾತಿಯವರಲ್ಲಿದ್ದ ಅನಾಚಾರಗಳನ್ನೆಲ್ಲಾ ತಪ್ಪಿಸಿ ಅವರುಗಳನ್ನು ಸನ್ಮಾರ್ಗಕ್ಕೆ ತರಲು ಬಹಳ ಪ್ರಯತ್ನಿಸಿದರು. ತಮ್ಮ ದೇವರ ನಾಮಗಳ ಮೂಲಕ ಜನರಿಗೆ ಉಪದೇಶ ಮಾಡುತಿದ್ದುದರಿಂದ ಎಲ್ಲರಿಗೂ ಇವರಲ್ಲಿ ಪೂಜ್ಯಭಾವನೆ ಯುಂಟಾಯಿತು. ಸೂಳೆಗಾರಿಕೆ, ಮದ್ಯಪಾನ ಇವುಗಳೂ ಕನಕದಾಸರ ಕಾಲದಲ್ಲಿ ಬಹಳ ಕಡಿಮೆಯಾಗಿ ಅನೇಕ ಸುಧಾರಣೆಗಳು ಜಾರಿಗೆ ಬಂದವು.

ಕನಕದಾಸರಿಗೆ ಸ್ವಪ್ನಮುಖೇನ ಶ್ರೀಹರಿಯು ತನಗೂ ಪದ್ಮಾವತಿಗೂ ಆಗುವ ಕಲ್ಯಾಣ ಮಹೋತ್ಸವಕ್ಕೆ ತಿರುಪತಿಗೆ ಬರುವಂತೆ ನಿಯಮಿಸಿದರು. ಅಂತೆಯೇ ಕನಕದಾಸರು ತಮ್ಮ ಏಕತಾರೆಯನ್ನು ಬಗಲಿಗೆ ಕಟ್ಟಿಕೊಂಡು ತಿರುಪತಿಗೆ ಪಾದಚಾರಿಯಾಗಿ ನಡೆದರು. ಪರಮ ಭಕ್ತನಾಗಿದ್ದ ಆಲಯಾಧಿಕಾರಿಗೆ ಶ್ರೀಹರಿಯು ಸ್ವಪ್ನಮುಖೇನ ತನ್ನ ಭಕ್ತನಾದ ಕನಕದಾಸನು ಬರುವುದನ್ನು ತಿಳಿಸಿ ಅವನನ್ನು ಮರ್ಯಾದೆಯಿಂದ ಎದುರುಗೊಳ್ಳಬೇಕೆಂದು ನಿಯಮಿಸಿದನು. ಇತ್ತ ಕನಕದಾಸರು ಏಕತಾರೆಯನ್ನು ಮೀಟುತ್ತಾ ಭಜನೆ ಮಾಡಿಕೊಂಡು ಶ್ರೀಹರಿಯ ದರ್ಶನಕ್ಕೆ ಬರುತ್ತಿದ್ದರು. ಆದರೆ ಅವರ ಮಾತಿನಿಂದಲೂ, ವೇಷ ಭೂಷಣಗಳಿಂದಲೂ ಅಧಿಕಾರಿಗಳು ಅವರನ್ನು ನೋಡಿದರೂ ಅವರು ಒಬ್ಬ ಹುಚ್ಚರಿರಬೇಕೆಂದು ತಿಳಿದುಕೊಂಡು ಅವರನ್ನು ಗುರುತಿಸಲಿಲ್ಲ. ಆದರಿಂದ ಸಂಜೆಯಾದರೂ ಕನಕದಾಸರು ಯಾರೆಂದು ತಿಳಿಯದಿರಲು ವಾಪಸ್ಸು ಹೊರಟು ಹೋದನು. ಕನಕದಾಸರು ಮುಂಚೆಯೇ ದೇವಾಲಯಕ್ಕೆ ಬಂದಿದ್ದರೂ ಅಲ್ಲಿ ಜನಸಂದಣಿಯು ಬಹಳವಾಗಿದ್ದು ದರಿಂದ

ಅವರಿಗೆ ಭಗವಂತನ ದರ್ಶನವೂ ಆಗದೆ, ಭಗವತ್ಪ್ರಸಾದವೂ ಲಭಿಸದೆ ಬಹಳವಾದ ಚಳಿಯಲ್ಲಿ ನಡುಗುತ್ತಾ ಒಂದು ಕಡೆ ಕಷ್ಟದಿಂದ ಕುಳಿತಿದ್ದರು. ಇತ್ತ ಇವರ ಕಷ್ಟವನ್ನು ಅರಿತ ಪರಮಾತ್ಮನು ತಾನೇ ಓರ್ವ ಪರಿಚಾರಕನಂತೆ ವೇಷವನ್ನು ಧರಿಸಿಕೊಂಡು ಬಂದು ಕನಕದಾಸರಿಗೆ ಊಟವನ್ನು ಕೊಟ್ಟು ಅವರಿಗೆ ಚಳಿಗೆ ಹೊದೆಯಲು ಬಂದು ಧೋತ್ರವನ್ನು ಕೊಟ್ಟು ಮಾಯವಾದನು. ಬಹಳವಾಗಿ ಬಳಲಿದ್ದ ಕನಕದಾಸರಿಗೆ ನಿದ್ರೆಯು ಆವರಿಸಲು ಅವರು ನಿದ್ರಾವಶರಾಗಿ ಅಲ್ಲಿಯೇ ಮಲಗಿಕೊಂಡರು; ಆದರೆ ಬೆಳಗ್ಗೆ ಅರ್ಚಕರಿಗೆ ದೇವರ ಮೇಲಿನ ವಸ್ತ್ರವು ಕಾಣದಿರಲು ಹುಡುಕುತ್ತಿದ್ದಾಗ ಅಲ್ಲಿಯೇ ಮಲಗಿದ್ದ ಕನಕದಾಸರು ತಮ್ಮ ಮೇಲೆ ಹೊದ್ದು ಕೊಂಡಿರುವ ಧೋತ್ರವನ್ನು ಕಂಡು ಅದು ಶ್ರೀಹರಿಯದೆಂದು ಗುರುತಿಸಿ ಅದನ್ನು ತೆಗೆದುಕೊಂಡು ಕನಕದಾಸರನ್ನು ಕಳವು ಮಾಡಿರುವರೆಂದು ತಿಳಿದು ಚೆನ್ನಾಗಿ ಹೊಡೆದರು. ಆದರೆ ಇವರಿಗೆ ಹೊಡೆದ ಹೊಡೆತದ ಗುರುತೆಲ್ಲಾ ಭಗವಂತನಮೇಲೆ ಇದ್ದುದನ್ನು ಅಧಿಕಾರಿಗಳು ನೋಡಿದರು. ಆಗ ಅವರಿಗೆ ಇವರೇ ಕನಕದಾಸರಿರಬೇಕೆಂದು ತಿಳಿಯಿತು. ಮತ್ತು ಅವರಮೇಲೆ ಪೂಜ್ಯಭಾವನೆ ಯುಂಟಾಗಿ ತಾವು ಅವರನ್ನು ಗುರುತಿಸದೆ ಇದ್ದುದಕ್ಕಾಗಿ ಅವರ ಕ್ಷಮೆಯನ್ನು ಯಾಚಿಸಿದರು. ಅನಂತರ ಅವರನ್ನು ದೇವಸ್ಥಾನಕ್ಕೆ ಸಕಲ ಮರ್ಯಾದೆಯೊಂದಿಗೆ ಕರೆತಂದು ದೇವರ ಸಮ್ಮುಖದಲ್ಲಿ ಏಕಾಂತ ಸೇವೆ ಮಾಡಲು ತೆರೆಯನ್ನು ಹಾಕಿಸಿದನು. ಆಗ ಕನಕದಾಸರು ಭಗವಂತನ ಮೇಲೆ ಅನೇಕ ದೇವರ ನಾಮಗಳನ್ನು ಹಾಡಿ ಭಕ್ತಿಯಿಂದ ಸ್ತೋತ್ರಮಾಡಿದರು.

ಒಮ್ಮೆ ವ್ಯಾಸರಾಯಸ್ವಾಮಿಗಳು ಭಗವಂತನಿಗೆ ಸಮರ್ಪಿಸಿದ ಫಲಗಳನ್ನು ತಮ್ಮ ಶಿಷ್ಯರುಗಳಿಗೆಲ್ಲಾ ಏಕಾಂತವಾದ ಸ್ಥಳದಲ್ಲಿ ಅದನ್ನು ಭುಜಿಸುವಂತೆ ಹೇಳಿ ಅವರುಗಳಿಗೆ ಕೊಟ್ಟರು. ಎಲ್ಲರೂ ಆ ಹಣ್ಣುಗಳನ್ನು ತಂದು ತಾವು ಏಕಾಂತವಾದ ಸ್ಥಳದಲ್ಲಿ ತಿಂದುದನ್ನು ಸ್ವಾಮಿಗಳಿಗೆ ತಿಳಿಸಿದರು. ಅವರಿಗೆ ಕೊಟ್ಟಂತೆಯೇ ಸ್ವಾಮಿಗಳು ಕನಕದಾಸರಿಗೂ ಫಲವನ್ನು ಕೊಟ್ಟು ಏಕಾಂತಸ್ಥಳದಲ್ಲಿ ತಿನ್ನುವಂತೆ ಹೇಳಿದರು. ಆದರೆ ಕನಕದಾಸರು ದೇವರಿಲ್ಲದ ಏಕಾಂತಸ್ಥಳವು ತಮಗೆ ಎಲ್ಲಿಯು ದೊರಕಲಿಲ್ಲವೆಂದು ಹೇಳಿ ಆ ಫಲವನ್ನು ಸ್ವಾಮಿಗಳಿಗೆ ವಾಪಸ್ಸು ಕೊಟ್ಟು ಬಿಟ್ಟರು. ಇದರಿಂದ ಸ್ವಾಮಿಗಳ ಇತರ ಶಿಷ್ಯರುಗಳಿಗೆಲ್ಲಾ ತಮಗೂ ಕನಕದಾಸರಿಗೂ ಇರುವ ವ್ಯತ್ಯಾಸವು ತಿಳಿಯಿತು.

ಕನಕದಾಸರು ವ್ಯಾಸರಾಯಸ್ವಾಮಿಗಳೊಂದಿಗೆ ಕೆಲವು ಕಾಲ ಇದ್ದು ಅನಂತರ ತಿರುಪತಿಗೂ ಹೋಗಿ ಕೆಲವು ಕಾಲ ಇದ್ದರು. ಆಮೇಲೆ ಕಾಗಿನೆಲೆಗೆ ಹೋಗಿ ಮುಂಡರಗಿ ಎಂಬಲ್ಲಿ ಮೋಹನ ತರಂಗಿಣಿ ಎಂಬ ಗ್ರಂಥವನ್ನು ಬರೆದು ಆದಿಕೇಶವನಿಗೆ ಅರ್ಪಿಸಿದರು. ಮುಂದೆ ಅನೇಕ ದೇವರ ನಾಮಗಳನ್ನು ಹಾಡಿದುದಲ್ಲದೆ ಹರಿಭಕ್ತಿಸಾರ, ನಳಚರಿತ್ರೆ ಮುಂತಾದ ಗ್ರಂಥಗಳನ್ನೂ, ನೃಸಿಂಹಸ್ತವ, ರಾಮಧಾನ್ಯ ಚರಿತ್ರೆ ಮುಂತಾದ ಸ್ತೋತ್ರಗಳನ್ನೂ, ರಚಿಸಿದರು. ಇಡೀ ಜನಾಂಗದವರಲ್ಲಿ ವಿಷ್ಣು ಭಕ್ತಿ ನೆಲೆಸಿ ಅವರಲ್ಲಿದ್ದ ಹಳೆಯ ಕಂದಾಚಾರದ ಪದ್ಧತಿಗಳು ಕಣ್ಮರೆಯಾಗಿ ಆರ್ಯಸಂಸ್ಕೃತಿಯು ನೆಲೆಸುವುದಕ್ಕೆ ಕನಕದಾಸರೇ ಕಾರಣರಾದರು. ಜಾತಿಯಲ್ಲಿ ತಿರಸ್ಕೃತರಾದವರಿಗೆ ಪುರಸ್ಕಾರವನ್ನು ಕೊಟ್ಟವರೇ ಕನಕದಾಸರು. ಈ ರೀತಿ ಅನೇಕ ಸುಧಾರಣೆಗಳನ್ನು ಮಾಡಿದರು.

ಕನಕದಾಸರು ತಮ್ಮ ಬಹುಭಾಗದ ಜೀವಿತವನ್ನು ತಿರುಪತಿಯಲ್ಲಿ ಕಳೆದರು. ಅನಂತರ ತೀರ್ಥಯಾತ್ರೆಗಳನ್ನು ಮಾಡುತ್ತಾ ಉಡುಪಿಗೆ ಬಂದರು. ಅಲ್ಲಿ ಮೇಲುಜಾತಿಯವರಿಗೆ ಮಾತ್ರ ಗರ್ಭಗುಡಿಗೆ ಪ್ರವೇಶವಿದ್ದಿತು. ಹೊರತು ಆದರಿಂದ ಅಲ್ಲಿ ಶ್ರೀಕೃಷ್ಣನ ದರುಶನವನ್ನು ಮಾಡಲು ಅವರಿಗೆ ಅವಕಾಶವಾಗಲಿಲ್ಲ. ಕನಕದಾಸರು ದೇವಸ್ಥಾನದ ಪಶ್ಚಿಮಭಾಗದಲ್ಲಿ ಸ್ತೋತ್ರಮಾಡುತ್ತಾ ಸುಮ್ಮನೆ ನಿಂತಿದ್ದರು. ಇವರನ್ನು ನೋಡಿದ ಮಠದ ನಿರ್ವಾಹಕರು ಕನಕದಾಸರಿಗೆ ದೇವರನ್ನು ಒಲಿಸಿಕೊಳ್ಳುವ ಶಕ್ತಿ ಇದ್ದರೆ ಅವರು ಒಲಿಸಿಕೊಳ್ಳಬಹುದೆಂದು ಹೇಳಿ ಹೊರಟು ಹೋದರು. ಕನಕದಾಸರು ಭಕ್ತಿಯಿಂದ ಭಗವಂತನನ್ನು ಸ್ತೋತ್ರಮಾಡುತ್ತಲೇ ಇರಲು ಇವರ ಭಕ್ತಿ ಪಾರವಶ್ಯತೆಗೆ ಭಗವಂತನು ಮೆಚ್ಚಿದನೋ ಎಂಬಂತೆ ಪಶ್ಚಿಮಾಭಿಮುಖವಾಗಿದ್ದ ಭಗವಂತನಾದ ಶ್ರೀಕೃಷ್ಣನು ತನ್ನ ಮೂರ್ತಿಯನ್ನು ತಟ್ಟನೆ ಪೂರ್ವಾಭಿಮುಖವಾಗಿ ತಿರುಗಿ ಕನಕದಾಸರಿಗೆ ಒಂದು ಸಣ್ಣ ಕಿಂಡಿಯಲ್ಲಿ ತನ್ನ ದರ್ಶನವನ್ನು ಇತ್ತನು. ವ್ಯಾಸರಾಯರಲ್ಲಿಯೇ ಶಿಕ್ಷಣವನ್ನು ಪಡೆದ ವಾದಿರಾಜ ಸ್ವಾಮಿಗಳಿಗೆ ವಿಷಯ ತಿಳಿದು ಈ ಕಿಂಡಿಯನ್ನು ಹಾಗೆಯೇ ಉಳಿಸಿಕೊಳ್ಳಲು ಏರ್ಪಾಡು ಮಾಡಿದರು. ಅನಂತರ ಅಲ್ಲಿ ''ಕನಕನಕಿಂಡಿ'' ಎಂದು ಒಂದು ಕಟಾಂಜನವು ನಿರ್ಮಿಸಲ್ಪಟ್ಟಿತು. ಇಂದಿಗೂ ಆ ಕಿಂಡಿಯು ಉಡುಪಿಯಲ್ಲಿದ್ದು ಉಡುಪಿಗೆ ಹೋಗುವರು ಅಲ್ಲಿಯೇ ಕೃಷ್ಣನನ್ನು ದರ್ಶನ ಮಾಡುತ್ತಾರೆ. ಕನಕದಾಸರು ಉಡುಪಿಯಲ್ಲಿದ್ದಾಗ ವಾದಿರಾಜ ಸ್ವಾಮಿಗಳೂ ಬಂದುದರಿಂದ ಇಬ್ಬರೂ ಪ್ರತಿರಾತ್ರಿಯೂ ಶ್ರೀಕೃಷ್ಣನಿಗೆ ಭಜನೆಯನ್ನು ಮಾಡುತ್ತಿದ್ದರು.

ಕನಕದಾಸರು ಉಡುಪಿಯನ್ನು ಬಿಟ್ಟು ಬೇಲೂರಿಗೆ ಬಂದು ಅಲ್ಲಿ ಸ್ವಲ್ಪಕಾಲವಿದ್ದರು. ಅವರು ಕಾಗಿನೆಲೆಯ ಆದಿಕೇಶವನ ಮುದ್ರಿಕೆಯಿಂದ ಅನೇಕದೇವರ ನಾಮಗಳನ್ನು ಹಾಡಿದರು. ಇವರು ಬೇಲೂರಿನಲ್ಲಿದ್ದ ಕಾಲದಲ್ಲಿ ವೈಕುಂಠದಾಸರೂ ಕೆಲವು ಕಾಲ ಇಲ್ಲಿಗೆ ಬಂದಿದ್ದ ಅವರ ಜೊತೆಯಲ್ಲಿದ್ದರು. ಇಬ್ಬರೂ ದಾಸರೂ ಪರೋಕ್ಷಜ್ಞಾನಿಗಳಾಗಿದ್ದು ಕೇಶವನ ಉಪಾಸಕರಾಗಿದ್ದರು. ಇಬ್ಬರೂ ಪರಮಾತ್ಮನನ್ನು ದರ್ಶನ ಮಾಡಿ ಗಾನ ಮಾಡುತ್ತಲೂ, ನರ್ತನ ಮಾಡುತ್ತಲೂ, ಭಕ್ತಿಪರವಶರಾಗುತ್ತಿದ್ದರು. ಕನಕದಾಸರು ಅವರ ಕಾಲದಲ್ಲಿ ಅನೇಕ ಅತಿಮಾನುಷ ಮಹಿಮೆಗಳನ್ನು ತೋರಿಸಿದರು. ಅವರು ಯಾವಾಗಲೂ ಪಲ್ಲಕ್ಕಿ ಮೇನೆಗಳಲ್ಲಿ ಕುಳಿತುಕೊಳ್ಳದೇ ಪಾದಚಾರಿಯಾಗಿಯೇ ಎಲ್ಲಾಕಡೆಗೂ ಪ್ರಮಾಣ ಮಾಡುತ್ತಿದ್ದರು. ಅನಂತರ ಮುಂದೆ ಅವರು ಬೇಲೂರಿನಿಂದ ಮೇಲುಕೋಟೆ, ನಂಜನಗೂಡು, ಶ್ರೀರಂಗಪಟ್ಟಣ, ಮುಳಬಾಗಿಲು - ಮುಂತಾದ ಕಡೆಗಳಿಗೆಲ್ಲಾ ಹೋಗಿ ಅಲ್ಲಿನ ದೇವರುಗಳ ಮೇಲೆ ಅನೇಕ ದೇವರನಾಮಗಳನ್ನು ರಚಿಸಿದರು.

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಟ್ರಸ್ಟ್

**ತಿ. ತಿ. ದೇವಸ್ಥಾನಗಳ ಪರಿಪಾಲನಾ ಭವನ, ಕೆ.ಟಿ.ರಸ್ತೆ ತಿರುಪತಿ, (ಆಂ.ಪ್ರ.),**

**(ನೋಂದಣೆ ಸಂಖ್ಯೆ - 18/94)**

**ಡಾ॥ ಪಿ. ಕೃಷ್ಣಯ್ಯ**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ದಾನಿಗಳೆ;

ಅನ್ನದಾನಕ್ಕಿಂತ ಇನ್ನು ದಾನಗಳಿಲ್ಲ. ನಮ್ಮ ದೇಶದಲ್ಲಿ ಅಗತ್ಯವಿದ್ದವರಿಗೆ, ಹಸಿದವರಿಗೆ ಅನ್ನದಾನ ಮಾಡುವುದು ಒಂದು ಸೇವೆ ಮಾತ್ರವೇ ಅಲ್ಲ, ವೇದಕಾಲದಿಂದಲೂ ಪರಂಪರೆಯಾಗಿ ಆಚರಣೆಯಲ್ಲಿರುವ ಪವಿತ್ರ ಕಾರ್ಯವಾಗಿದೆ. ಅನ್ನದಾನ ಮಾಡುವವರು ದೇವತೆಗಳ ಸಮರಾಗುವರೆಂದು ಹೇಳಲಾಗಿದೆ.

ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ಉಚಿತವಾದ ಹಾಗೂ ಆರೋಗ್ಯಕರವಾದ ಭೋಜನವನ್ನು ನೀಡುವ ಉದ್ದೇಶದಿಂದ ಶ್ರೀ ವೆಂಕಟೇಶ್ವರ ಅನ್ನದಾನ ಟ್ರಸ್ಟ್ 1985 ರಲ್ಲಿ ತಿ. ತಿ. ದೇವಸ್ಥಾನಗಳಿಂದ ಆರಂಭವಾಯಿತು. ಇದಕ್ಕೆ ಭಾರತದ ಎಲ್ಲೆಡೆಗಳಿಂದಲೂ ದಾತರ ಉತ್ಸಾಹಪೂರ್ಣವಾದ ಬೆಂಬಲ ಕಂಡುಬಂದಿದೆ.

ಈ ಯೋಜನೆಯ ವಿವರಗಳು :

I. ವ್ಯಕ್ತಿ, ಸಂಘ, ಸಂಸ್ಥೆಗಳವರು ವೈಯಕ್ತಿಕವಾಗಿ ಅಥವಾ ಎರಡೆರಡು ಸಂಘ ಸಂಸ್ಥೆಗಳು ಐದು ಲಕ್ಷ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ದಾನ ಮಾಡಬಹುದು.

1. ದಾನಿಗಳ ಹೆಸರನ್ನು ಎದ್ದು ಕಾಣುವಂತೆ ಉಚಿತ ಭೋಜನದ ಕೋಣೆಗಳಲ್ಲಿ ಬರೆಸಿಡಲಾಗುವುದು.
2. ದಾನಿಗಳಿಗೆ ವರ್ಷಕ್ಕೆ ಒಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ಉಚಿತ ಸುಸಜ್ಜಿತ ವಸತಿ ನೀಡಲಾಗುವುದು.
3. ದಾನಿಯ ಐದುಮಂದಿಗೆ ಉಚಿತವಾಗಿ ದರ್ಶನವನ್ನು ಏರ್ಪಡಿಸಲಾಗುವುದು.
4. ದಾನಿಗಳಿಗೆ ಒಮ್ಮೆ ಮಾತ್ರವೇ ಸ್ವಾಮಿಯ ಹಾಗೂ ಅಮ್ಮನವರ ಬಂಗಾರದ ಮುಲಾಮಿನ ಪ್ರತಿಮೆಗಳ ಜ್ಞಾಪಿಕೆಯನ್ನು ನೀಡಲಾಗುವುದು. ವರ್ಷಕ್ಕೆ ಒಮ್ಮೆ ಉತ್ತರೀಯ ಬಹುಮಾನ ನೀಡಲಾಗುವುದು.
5. 80 (ಜಿ) ಕಲಮು ಹೇಳುವಂತೆ ಈ ದಾನವು ಆದಾಯಕರ ಮುಕ್ತವಾಗಿರುತ್ತದೆ.

II. ಎಸ್. ವಿ. ನಿತ್ಯಾನ್ನದಾನಯೋಜನೆಗೆ ತಮ್ಮ ವಂತಿಗೆಯಾಗಿ ಒಂದು ಸಾವಿರ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ವಂತಿಗೆಯನ್ನು ನೀಡಿ 80 (ಜಿ.) ಕಲಮಿನನ್ವಯ ಆದಾಯಕರ ವಿಮುಕ್ತಿಯನ್ನು ಪಡೆಯಬಹುದಾಗಿದೆ.

ದಾನಗಳನ್ನು ಹೇಗೆ ಕಳುಹಿಸಬೇಕು :

ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ "ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಟ್ರಸ್ಟ್" ಹೆಸರಿನಲ್ಲಿ ಡಿ. ಡಿ. ಯನ್ನು ಪಡೆದು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ, ಆಂಧ್ರಪ್ರದೇಶ. ಇವರಿಗೆ ಕಳುಹಿಸಬೇಕು.

ಹೆಚ್ಚಿನ ಮಾಹಿತಿಗಾಗಿ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ.ತಿ.ದೇ. ಪರಿಪಾಲನಾಭವನ - ತಿರುಪತಿ - 517 501.

ಕನಕದಾಸರೂ ಪುರಂದರದಾಸರಂತೆಯೇ ಸಮಾಜಸೇವೆಯನ್ನು ಮಾಡಿದರು. ಅವರಿಗೆ ತೊಂಬತ್ತು ವರ್ಷ ವಯಸ್ಸಾದರೂ ಜಗಜಟ್ಟಿಯಂತೆ ಕಂಗೊಳಿಸುತ್ತಿದ್ದರು. ತಮ್ಮ ಏಕತಾರೆಯನ್ನೂ, ದಂಡವನ್ನೂ ಹಿಡಿದುಕೊಂಡು ವೆಂಕಟಾಚಲಪತಿಯ ಗರ್ಭಗೃಹವನ್ನು ದೇವರನ್ನು ಸೇವೆ ಮಾಡಬೇಕೆಂದು ಪ್ರವೇಶಮಾಡಿದ ಕನಕದಾಸರು ಎಷ್ಟು ಹೊತ್ತಾದರೂ ಹೊರಗೆ ಬರದೆ ಭಗವಂತನಲ್ಲಿಯೇ ಐಕ್ಯವಾದರು. ಹಿಂದೆ ತಮಿಳುನಾಡಿನಲ್ಲಿ ತಿರುಪ್ಪಾವೈಯನ್ನು ಬರೆದು ಪ್ರಸಿದ್ಧಳಾಗಿದ್ದ ಆಂಡಾಳ್ ದೇವಿಯು ಶ್ರೀರಂಗದ ಶ್ರೀರಂಗನಾಥನ ಪಾದಾರವಿಂದದಲ್ಲಿ ಐಕ್ಯಳಾದಳೆಂದು ಚರಿತ್ರೆಯಿದೆ. ಅಂತೆಯೇ ತಿರುಪತಿಯ ವೆಂಕಟಾಚಲಪತಿಯ ಪಾದಾರವಿಂದದಲ್ಲಿ ಕನ್ನಡದ ಹರಿದಾಸರೊಬ್ಬರು ಅದೃಶ್ಯವಾದ ಸಂಗತಿಯು ಪುನರಾವರ್ತನವಾದಂತೆ ಆಯಿತು.

ಕನಕದಾಸರು ದೇವರನಾಮದಲ್ಲಿ ಭಗವಂತನ ಮಹಿಮೆಯನ್ನು ತಿಳಿಸುತ್ತಾರೆ-

ತಲ್ಲಣಿಸದಿರುಕಂಡ್ಯ ತಾಳು ಮನವೇ
ಎಲ್ಲರನು ಸಲಹುವನು ಇದಕ್ಕೆ ಸಂಶಯವಿಲ್ಲ
ಬೆಟ್ಟದಾ ತುದಿಯಲ್ಲಿ ಪುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೋ
ಪುಟ್ಟಿಸಿದ ಸ್ವಾಮಿ ತಾ
ಹೊಣೆಗಾರನಾದ ಮೇಲೆ
ಗಟ್ಯಾಗಿ ಸಲಹುವನು ಇದಕೆ ಸಂಶಯವಿಲ್ಲ
ಅಡವಿ ಯೊಳಗಾಡುವ ಮೃಗಪಕ್ಷಿಗಳಿಗೆಲ್ಲಾ
ಅಡಿಗಡಿಗೆ ಆಹಾರವಿತ್ತವರು ಯಾರೋ
ಪಡೆದ ಜನನಿಯ ತೆರದಿ
ಸ್ವಾಮಿ ಹೊಣೆಗೇಡಾಗಿ
ಬಿಡದೆ ರಕ್ಷಿಸುವನಿದಕೆ ಸಂಶಯಬೇಡ
ಕಲ್ಲೊಳಗೆ ಪುಟ್ಟಿ ಕೂಗುವ ಕಪ್ಪೆಗಳಿಗೆಲ್ಲಾ
ಅಲ್ಲಲ್ಲಿ ಆಹಾರ ವಿತ್ತವರು ಯಾರೋ
ಬಲ್ಲಿದನು ಕಾಗಿನೆಲೆ ಆದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ

★★★★★


ತಿರುಚಾನೂರು
ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವಗಳು
12-11-2001 ರಿಂದ 20-11-2001 ವರೆಗೆ
SIVA





ಧ್ವಜಾರೋಹಣ ↑

ಹಂಸವಾಹನ →

ಸಿಂಹವಾಹನ ↓



↑ ದೊಡ್ಡ ಶೇಷವಾಹನ

↓ ಚಿಕ್ಕ ಶೇಷವಾಹನ













ಹನುಮಂತವಾಹನ ↑

ಸೂರ್ಯಪ್ರಭ ವಾಹನ →

ರಥೋತ್ಸವ ↓



↑ ಗಜವಾಹನ

↓ ಅಶ್ವವಾಹನ











## ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಬ್ರಹ್ಮೋತ್ಸವಗಳು

**ಸೆಪ್ಟಂಬರ್ 20 ರಿಂದ 28 ರ ವರೆಗೆ ನಡೆದವು**

**ಆಗ ತೆಗೆದ ಹಲವು ಚಿತ್ರಗಳು**

















1. ಬ್ರಹ್ಮೋತ್ಸವದಲ್ಲಿನ ಗರುಡೋತ್ಸವದಂದು ಸ್ವಾಮಿಗೆ ಆಂಧ್ರಪ್ರದೇಶದ ಸರ್ಕಾರದ ವತಿಯಿಂದ ರೇಷ್ಮೆವಸ್ತ್ರಗಳನ್ನು ತಲೆಯಮೇಲೆ ಹೊತ್ತುತಂದು ಸಮರ್ಪಿಸಿದ ಮುಖ್ಯಮಂತ್ರಿ ಶ್ರೀ ನಾರಾ ಚಂದ್ರಬಾಬು ನಾಯುಡು ಅವರು.
2. ದಾಸ ಸಾಹಿತ್ಯಪ್ರಾಜೆಕ್ಟ್ ವತಿಯಿಂದ ವಿವಿಧ ಭಜನ ಸಂಘಗಳು ಸ್ವಾಮಿಯ ವಾಹನ ಸೇವೆಗಳಲ್ಲಿ ನೃತ್ಯ ಕೋಲಾಟಗಳಲ್ಲಿ ತೊಡಗಿ ಸ್ವಾಮಿಯನ್ನು ಸ್ವಾಗತಿಸುತ್ತ ಹರಿದಾಸರ ಹಾಡುಗಳನ್ನು ಸ್ವಾಮಿಗೆ ಸಮರ್ಪಿಸಿದರು.
3. ತಿರುಮಲೆಯ ಆಸ್ಥಾನ ಮಂಟಪದಲ್ಲಿ ಧರ್ಮಪ್ರಚಾರ ಪರಿಷತ್ ವತಿಯಿಂದಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಗಿದ್ದು ಸಂಕೀರ್ತನ ಪೂಜೆ, ವಾದ್ಯ ವಿಶೇಷ, ಪುರಾಣಪಠಣ, ಮಹಾತ್ಮರ ಆಶೀರ್ವಾದಗಳು ನಡೆದವು.






ಬ್ರಹ್ಮೋತ್ಸವಗಳ
ಅಂಗವಾಗಿ
ತಿರುಮಲೆ ತಿರುಪತಿಗಳಲ್ಲಿ
ಹಲವು ಹನ್ನೊಂದು
ಕಾರ್ಯಕ್ರಮಗಳು ನಡೆದವು.
ಅವುಗಳ ಕೆಲವು ಚಿತ್ರಗಳನ್ನು
ಕಾಣಬಹುದು.






# ತಿ. ತಿ. ದೇ. ಸಿಬ್ಬಂದಿ ಸಂಕ್ಷೇಮ ವಿಭಾಗ

- ಒಂದು ಟಿಪ್ಪಣಿ.

ತಿರುಮಲ ತಿರುಪತಿ ದೇವಸ್ಥಾನಗಳಲ್ಲಿ ಸರಿಸುಮಾರು 15000 ಮಂದಿ ಕೆಲಸ ಮಾಡುತ್ತಿದ್ದು, ಶಿಕ್ಷಣ ಸಂಸ್ಥೆಗಳೂ ಸೇರಿ ಸುಮಾರು 280 ವಿಭಾಗಗಳಿವೆ. ಹೀಗಾಗಿ ಈ ಎಲ್ಲ ವಿಭಾಗಗಳ ಎಲ್ಲ ಸಿಬ್ಬಂದಿಯ ಸಂಕ್ಷೇಮವನ್ನು ನೋಡಿಕೊಳ್ಳಲು ಒಂದು ವಿಭಾಗ ವುಂಟಾಗಿದೆ. ಅದನ್ನು ಸಂಕ್ಷೇಮ ವಿಭಾಗವೆಂದೇ ಕರೆದು ಕೆಳಕಂಡ ವಿಷಯಗಳ ಆಡಳಿತ ಭಾರವನ್ನು ಒಪ್ಪಿಸಲಾಗಿದೆ. ಈ ಹೊಣೆಗಳು ಈ ರೀತಿಯಿವೆ-

★ ಸಂಘ ಸಂಸ್ಥೆಗಳ ಮುಲಕ ಅಥವಾ ಇತರತ್ರ ತಿಳಿದುಬರುವ ಸಿಬ್ಬಂದಿ ಸಮಸ್ಯೆಗಳನ್ನು ಬಗೆಹರಿಸುವುದು.

★ ಸಿಬ್ಬಂದಿಗೆ ಮನರಂಜನೆಯ ಅವಕಾಶ ವೊದಗಿಸಲು ತಿರುಮಲೆ - ತಿರುಪತಿಗಳಲ್ಲಿ ಮನರಂಜನಾ ಸೌಲಭ್ಯ ಕೊಠಡಿಗಳನ್ನು ಒದಗಿಸುವುದು.

★ ಸಿಬ್ಬಂದಿಯ ಸ್ವಾಸ್ಥ್ಯವನ್ನು ಹೆಚ್ಚಿಸುವಂತೆ ವಾರ್ಷಿಕ ಕ್ರೀಡಾ ಕೂಟಗಳನ್ನು ಏರ್ಪಡಿಸುವುದು.

★ ಸಾಂಸ್ಕೃತಿಕ ಚಟುವಟಿಕೆಗಳಿಗೆ ಆರ್ಥಿಕ ನೆರವನ್ನು ಒದಗಿಸುವುದು.

★ ಸಂಕ್ಷೇಮ ನಿಧಿಯ ಆಡಳಿತ ನಿರ್ವಹಣೆ.

★ ಸಮವಸ್ತ್ರಗಳು, ಚಳಿಗಾಲದ ಉಡುಪುಗಳನ್ನು ಸಿಬ್ಬಂದಿಗೆ ಒದಗಿಸುವಿಕೆ.

**ಸಂಕಷ್ಟ ಪರಿಹಾರ ಪದ್ಧತಿ**

ಸಿಬ್ಬಂದಿಯ ಸಂಕಷ್ಟದಲ್ಲಿ, ಸಂಕ್ಷೇಮಾಧಿಕಾರಿಯು ಮಧ್ಯವರ್ತಿಯಾಗಿ ಸಿಬ್ಬಂದಿಯ ಸಂಕ್ಷೋಭೆಯನ್ನು ವಿಶ್ಲೇಷಿಸಿ ಅದರ ಪರಿಹಾರಕ್ಕೆ ಪ್ರಯತ್ನಿಸುವರು. ಸಿಬ್ಬಂದಿಯಿಂದ ಪುಕಾರು-ದೂರು-ಬಂದಾಗ ಆ ಬಗ್ಗೆ ಕ್ರಮ ತೆಗೆದುಕೊಂಡು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಯೊಡನೆ ಚರ್ಚಿಸಿ, ಸಂಬಂಧ ಪಟ್ಟ ಇಲಾಖೆಯ ಮುಖ್ಯಸ್ಥರೊಡನೆ ಚರ್ಚಿಸಿ, ಸಮಸ್ಯೆಯ ಇತಿಮಿತಿಗಳನ್ನು ಪರಿಹಾರ ರೂಪಗಳ ವಿವರಗಳನ್ನೂ, ಡೆ.ಇ.ಓ. ಆರ್ಥಿಕ ಸಲಹಾದಾರ ಮೊದಲಾದವರು ಕೂಡಿದ ಹಾಗೂ ಕಾರ್ಯನಿರ್ವಹಣಾಧಿಕಾರಿಗಳು ಅಧ್ಯಕ್ಷರಾಗಿರುವ ಒಂದು ಉನ್ನತ ಮಟ್ಟದ ಸಮಸ್ಯಾ ಪರಿಹಾರ ಶೋಧ ಸಮಿತಿಯಲ್ಲಿ ವರದಿಯನ್ನು ಒಪ್ಪಿಸಿ ಅಲ್ಲಿ ಒಂದು ನಿರ್ಣಯವನ್ನು ಪಡೆಯಲಾಗುವುದು. ಈ ನಿರ್ಣಯವನ್ನು ಕಾರ್ಯರೂಪಕ್ಕೆ ತರಲು ಇಲಾಖಾ ಮುಖ್ಯಸ್ಥರಿಗೆ ಒಪ್ಪಿಸಲಾಗುವುದು.

**ಮನರಂಜನೆಯ ಅವಕಾಶಗಳು :**

ತಿರುಮಲೆಯಲ್ಲಿ ಮಹಿಳೆಯರಿಗೆ ಹಾಗೂ ಪುರುಷರಿಗೆ ಮೀಸಲಾದ ಎರಡು ಎರಡು ಸಿಬ್ಬಂದಿ ಮನರಂಜನಾ ಕೋಣೆಗಳಿವೆ.



## ಗೃಹ ನಿರ್ಮಾಣ ಯೋಜನೆ

1981 ರಲ್ಲಿ ತಿ. ತಿ. ದೇವಸ್ಥಾನಗಳು ಸಿಬ್ಬಂದಿಗಾಗಿ 'ನಿಮ್ಮ ಗೃಹ ನಿರ್ಮಾಣ ಯೋಜನೆ'ಯನ್ನು ಆರಂಭಿಸಿದೆ. ಇದರಿಂದಾಗಿ ತಿರುಪತಿಯ ಬೈರಾಗಿ ಪಟ್ಟೆಡ, ಕೇಸವಾಯನಿಗುಂಟ, ಮುತ್ಯಾಲರೆಡ್ಡಿಪಲ್ಲಿ ಶ್ರೀಲಕ್ಷ್ಮೀ ಶ್ರೀನಿವಾಸ ನಗರ್‌ಗಳು ಉಂಟಾಗಿವೆ. ಸಿಬ್ಬಂದಿಯ ಸೇವಾ ಗರಿಷ್ಠತೆಯ ಆಧಾರದಲ್ಲಿ 1981 ರಿಂದಲೇ ಕಟ್ಟಿದ ಮನೆಗಳ ವಿತರಣೆ ಆರಂಭಿಸಲಾಗಿದೆ. ಕೆಳಗೆ ನೀಡಲಾಗಿರುವ ಪಟ್ಟಿಯನ್ನು ಗಮನಿಸಬಹುದು.

| | | | | |
|---|---|---|---|---|
| 1. | ವೈಕುಂಠ ಪುರದಲ್ಲಿ ಸಿದ್ಧ ಗೃಹಗಳು | 150 | | 1981 |
| 2. | ಬೈರಾಗಿ ಪಟ್ಟೆಡ | 665 | ಸೈಟುಗಳು | 1998 |
| 3. | ಕೇಸವಾಯನಿಗುಂಟ | 200 | ಸೈಟುಗಳು | 1985 |
| 4. | ಮುತ್ಯಾಲರೆಡ್ಡಿಪಲ್ಲಿ | 232 | ಸೈಟುಗಳು | 1991 |
| 5. | ಎಸ್. ವಿ. ಡೈರಿಫಾರಂ - ಎಲ್. ಎಸ್. ನಗರ್ | 245 | ಸೈಟುಗಳು | 1993 |

ಜೊತೆಗೇ ಮುಖ್ಯ ವಿಭಾಗಗಳಿಗೆ - ತಿ.ತಿ.ದೇ. ಪ್ರೆಸ್ ಸಿಬ್ಬಂದಿ, ತಿ.ತಿ.ದೇ. ಸಾರಿಗೆ ಸಿಬ್ಬಂದಿಯವರಿಗೆ ಪ್ರತ್ಯೇಕ ಮನರಂಜನಾ ಕೊಟಡಿಗಳನ್ನು ನೀಡಲಾಗಿದೆ.

ಇಲ್ಲೆಲ್ಲ ಒಳಾಂಗಣ ಕ್ರೀಡೆಗಳಾದ ಕೇರಂ, ಚೆಸ್, ಮೊದಲಾದವುಗಳಿಗೆ ಅವಕಾಶವುಂಟು. ಜೊತೆಗೇ ಸಮಾಚಾರ ಪತ್ರಿಕೆಗಳೂ ಸರಬರಾಜು ಆಗುತ್ತದೆ.

**ಸಿಬ್ಬಂದಿಯ ವಾರ್ಷಿಕ ಆಟೋಟಸ್ಪರ್ಧೆಗಳು :**

ಆಟೋಟಗಳ ವಾರ್ಷಿಕ ಸ್ಪರ್ಧೆಗಳನ್ನು ನಿಯತವಾಗಿ ನಡೆಸಲಾಗುತ್ತಿದೆ. ಈ ವರ್ಷದ ಆಟೋಟದ ಸಮ್ಮೇಳನದ ಮೀಸಲು ಧನ 3.4 ಲಕ್ಷ ರೂಪಾಯಿಗಳು.

**ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಆರ್ಥಿಕ ನೆರವು :**

ಸಿಬ್ಬಂದಿಯ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ - ನಾಟಕ ಮುಂತಾದವುಗಳಿಗೆ ತಿ.ತಿ.ದೇ. ಆರ್ಥಿಕ ನೆರವು ನೀಡುತ್ತದೆ. ಸಂಬಂಧಿತ ಸಿಬ್ಬಂದಿ ಸಂಘಟನೆಗಳು ಅಭ್ಯರ್ಥನೆ ಸಲ್ಲಿಸಿದಾಗ ಅದರ ವೆಚ್ಚಗಳಿಗಾಗಿ ಹತ್ತು ಸಾವಿರ ರೂಪಾಯಿಗಳ ವರೆಗೆ ನೆರವು ನೀಡಲಾಗುತ್ತದೆ. ಇದಕ್ಕೆಂದು ಕೇವಲ ಪೌರಾಣಿಕ ವಿಷಯದ ನಾಟಕಗಳು ಮಾತ್ರವಾಗಿರಬೇಕು. ಇವೂ ಸಹ ಹಬ್ಬ ಹರಿದಿನಗಳಲ್ಲಿ ನಟಿಸುವಂತಹದ್ದಾಗಿರಬೇಕು.

**ಸಮವಸ್ತ್ರವಿತರಣೆ :**

ಹಲವು ವಿಭಾಗಗಳ ಸಿಬ್ಬಂದಿಗೆ ಸಮವಸ್ತ್ರವನ್ನು ಎರಡು ವರ್ಷಕ್ಕೆ ಒಮ್ಮೆ ನೀಡಲಾಗುತ್ತದೆ. ತಿರುಮಲೆಯಲ್ಲಿ ಕೆಲಸಮಾಡುವ ಉದ್ಯೋಗಿಗಳಿಗೆ ಚಳಿಗಾಲದಲ್ಲಿ ರಕ್ಷಣೆಗೆಂದು ಶಾಲುಗಳು, ಉಣ್ಣೆಯ ಹೊದಿಕೆಗಳನ್ನು ನೀಡಲಾಗುವುದು. ಹಲವು ವಿಭಾಗದ ಸಿಬ್ಬಂದಿಗೆ ಮಳೆಕೋಟುಗಳು ಬೂಟುಗಳು, ಚಪ್ಪಲಿಗಳು ಅಗತ್ಯವಿದ್ದು ಅವುಗಳನ್ನೂ ವಿತರಣೆ ಮಾಡಲಾಗುವುದು.

**ಸಂಕ್ಷೇಮ ನಿಧಿ :**

ತಿ. ತಿ. ದೇವಸ್ಥಾನಗಳಲ್ಲಿ ಸಿಬ್ಬಂದಿ ಸಂಕ್ಷೇಮನಿಧಿ ಉಂಟು. ಎಲ್ಲ ಉದ್ಯೋಗಿಗಳೂ ಈ ನಿಧಿಯ ಸದಸ್ಯರಾಗಿರುತ್ತಾರೆ. ಪ್ರತಿಯೊಬ್ಬ ಉದ್ಯೋಗಿಯಿಂದಲೂ ತಾರತಮ್ಯವಿಲ್ಲದಂತೆ ಮಾಸಿಕ ವಂತಿಗೆಯಾಗಿ ನಲವತ್ತೈದು ರೂಪಾಯಿಗಳನ್ನು ಪಡೆದು ಉದ್ಯೋಗಿಯ ನಿವೃತ್ತಿ ಅಥವಾ ಮರಣದ ಹೊತ್ತಿಗೆ ಇಪ್ಪತ್ತು ಸಾವಿರ ರೂಪಾಯಿಗಳನ್ನು ಕೊಡಮಾಡಲಾಗುವುದು. ಉದ್ಯೋಗದ ಕಾಲದಲ್ಲಿಯೇ ಮರಣ ಹೊಂದಿದರೆ ಮರಣ ಹೊಂದಿದ ಉದ್ಯೋಗಿಯ ವಾರಸುದಾರರಿಗೆ ಈ ಹಣ ಸೇರುವುದು. ಸರಿಸುಮಾರು 3.3 ಕೋಟಿ ರೂಪಾಯಿಗಳ ನಿಧಿ ಸಂಗ್ರಹಣೆಯಿದ್ದು ಈ ನಿಧಿಯನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳು, ಯೂನಿಟ್ ಟ್ರಸ್ಟ್ ಆಫ್ ಇಂಡಿಯಾ ಮೊದಲಾದ ಕಡೆ ಠೇವಣಿ ಮಾಡಲಾಗಿದೆ. ಈಗ ಸಧ್ಯಕ್ಕೆ ಉದ್ಯೋಗಿ ಸಂಕ್ಷೇಮನಿಧಿಯಲ್ಲಿ 11335 ಕೆಲಸಗಾರರು ಸದಸ್ಯರಾಗಿದ್ದಾರೆ.

ಸಿಬ್ಬಂದಿಯ ಕ್ಷೇಮ ಲಾಭಗಳನ್ನು ಧ್ಯೇಯವಾಗಿಟ್ಟುಕೊಂಡು ಕೆಲಸಮಾಡುತ್ತಿರುವ ಸಂಕ್ಷೇಮ ವಿಭಾಗದ ಕೆಲಸದಿಂದ ಸಿಬ್ಬಂದಿ ತೃಪ್ತಿ ಹೊಂದಿದ್ದಾರೆ ಎಂಬುದು ವರದಿಗಳಿಂದ ಸ್ಪಷ್ಟವಾಗಿದೆ. ಹೊಸ ಹೊಸ ಅನುಕೂಲಗಳನ್ನು ಮಾಡಿಕೊಡುವಲ್ಲಿಯೂ ವಿಭಾಗ ಯಶಸ್ವಿಯಾಗಿ ಕೆಲಸಮಾಡುತ್ತಿದೆ. ★

**2000 - 2001 ರಲ್ಲಿ ಸಂಕ್ಷೇಮನಿಧಿಯ ಫಲಾನುಭವಿಗಳು 466. ವಿವರ ಹೀಗಿದೆ -**

| | | | |
|---|---|---|---|
| ನಿವೃತ್ತಿ ಪಡೆದವರು | 170 | ಮಂದಿ | ರೂ. 30,51,251-00 |
| ಆರೋಗ್ಯ ರೀತ್ಯಾ ನಿವೃತ್ತರಾದವರು | 200 | ಮಂದಿ | ರೂ. 28,20,857-00 |
| ಮರಣ ಹೊಂದಿದವರು | 96 | ಮಂದಿ | ರೂ. 11,55,102-00 |
| ಒಟ್ಟು | 466 | ಮಂದಿ | ರೂ. 70,27,210-00 |

# ದಿವ್ಯಪ್ರಬಂಧ ಸಂಗೀತ

- ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ.

ಭಾರತೀಯ ಸಂಸ್ಕೃತಿಯ ಇತಿಹಾಸದಲ್ಲಿ ಭಕ್ತಿ ಚಳುವಳಿಯು ಒಂದು ಮಹತ್ವದ ಕಾಲ. ಕಲುಷಿತಗೊಂಡಿದ್ದ ವೈದಿಕಧರ್ಮವನ್ನು ಶುದ್ಧೀಕರಿಸಿ, ದೇಶದ ಸಂಸ್ಕೃತಿ ಮತ್ತು ದೇಶಾಭಿಮಾನವನ್ನು ಜಾಗೃತಗೊಳಿಸಿ ಪ್ರಥಮತಃ ಪುನರುತ್ಥಾನ ಮಾಡಿದ ಮಹಾಪುರುಷರು ಆದಿ ಶಂಕರಾಚಾರ್ಯರು. ತರುವಾಯ ಭಗವದ್ರಾಮಾನುಜಾಚಾರ್ಯರು, ನಂತರ ಶ್ರೀ ಮದಾನಂದ ತೀರ್ಥರು. ವೇದೋಪನಿಷತ್ತುಗಳ ಕಾಲದಿಂದಲೂ ಭಕ್ತಿಯ ಹಿರಿಮೆ ಪ್ರತಿಪಾದಿತವಾಗಿದ್ದರೂ, ಅದಕ್ಕೆ ಪ್ರಾಮುಖ್ಯತೆ ನೀಡಿ ಭಕ್ತಿ ಪಂಥಗಳ ಗಂಗಾ ಯಮುನಾಗಳನ್ನು ಉತ್ತರಾಭಿಮುಖವಾಗಿ ಹರಿಸಿದ ಕೀರ್ತಿ ದಕ್ಷಿಣ ಭಾರತಕ್ಕೆ ಸೇರಿದೆ.

ಸುಮಾರು ಕ್ರಿ.ಶ. 9 ನೇ ಶತಮಾನಕ್ಕೂ ಹಿಂದೆ ತಮಿಳು ನಾಡಿನಲ್ಲಿ ಶೈವನಾಯನ್ಮಾರರೂ ವೈಷ್ಣವ ಆಳ್ವಾರರೂ ಶಿವ ಮತ್ತು ವಿಷ್ಣು ಭಕ್ತಿಗೆ ಅಗ್ರಸ್ಥಾನವನ್ನು ಕೊಟ್ಟು, ತಮ್ಮ ಆಳವಾದ ಅನುಭಾವದಿಂದ ದೈವಭಕ್ತಿಯ ಹಿರಿಮೆಗರಿಮೆ ಗಳನ್ನು ಸಾರಿ ಜನರ ಭಾಷೆಯಲ್ಲಿ ಹಾಡಿದರು. ಆಳ್ವಾರರು ಹನ್ನೆರಡು ಮಂದಿಯಾದರೆ, ನಾಯನ್ಮಾರರು ಅರವತ್ಮೂರು ಮಂದಿ. ಆಳ್ವಾರರು ಹರಿದಾಸ ಶಿರೋಮಣಿಗಳು. ನಾಯನ್ಮಾರರು ಶಿವದಾಸ ಶಿರೋಮಣಿಗಳು. ನಾಯನ್ಮಾರರು ಹಾಡಿದ ತಿರುವೆಣ್ಬಾ, ತಿರುಪ್ಪುಗಳು, ತೇವಾರಗಳು - ಮುಂತಾದು ವನ್ನೂ, ಆಳ್ವಾರರು ಹಾಡಿದ ನಾಲಾಯಿರ ದಿವ್ಯಪ್ರಬಂಧಗಳನ್ನೂ (ದ್ರಾವಿಡವೇದ) ಈಗಲೂ ಶಿವ ಮತ್ತು ವಿಷ್ಣು ದೇವಾಲಯಗಳಲ್ಲಿ ನಿತ್ಯಾನುಸಂಧಾನ ಮಾಡುವುದನ್ನು ನಾವು ಕೇಳಬಹುದಾಗಿದೆ. ಆಳ್ವಾರ್ ಎಂದರೆ ಭಗವದ್ಭಕ್ತಿಯ ಆಳದಲ್ಲಿ ಮುಳುಗಿದವರು. ಆ ಅನುಭಾವದ ಆಳವನ್ನು ಕಂಡವರು ಎಂದರ್ಥ. ಇವರೆಲ್ಲರೂ ಅನುಭಾವೀ ಸಂತತಿಯವರು.

ಈಗ ಐತಿಹಾಸಿಕವಾಗಿ ದೊರೆಯುವ ಆಧಾರಗಳ ಪ್ರಕಾರ ಆದಿಪ್ರವರ್ತಕರೆನಿಸಿದ ಶ್ರೀರಂಗನಾಥಮುನಿಗಳಿಗೆ ಅಥವಾ ನಾಥಮುನಿ ಗಳಿಗೆ ಎಲ್ಲ ಆಳ್ವಾರರ ಸಮಗ್ರಸಾಹಿತ್ಯ ಮೊದಲಿಗೆ ದೊರೆಯದೆ ಹೋಯಿತು. ನಾಥಮುನಿಗಳು ಆಳ್ವಾರರ ಹಿರಿಮೆಯನ್ನು ಅರಿತುಕೊಂಡ ಬಗ್ಗೆ ಒಂದು ಕಥೆಯಿದೆ - ಇವರು ಈಗಿನ ದಕ್ಷಿಣ ಆರ್ಕಾಟ್ ಜಿಲ್ಲೆಯ ವೀರನಾರಾಯಣ ಪುರದವರು. ಸಂಸ್ಕೃತದಲ್ಲಿ ಪ್ರಕಾಂಡ ಪಂಡಿತರು, ಶಾಸ್ತ್ರಗಳನ್ನೆಲ್ಲ ಚೆನ್ನಾಗಿ ಅಧ್ಯಯನ ಮಾಡಿದವರು. ಬಹುಶ್ರುತರಾದ ಯೋಗಿಗಳು. ನಾಡೆಲ್ಲ ಸುತ್ತಾಡಿ ಸ್ವಂತ ಊರಿಗೆ ಬಂದು ನೆಲೆಸಿದ್ದರು. ಒಂದು ದಿನ ಊರದೇವಾಲಯದಲ್ಲಿ ಬೇರೆಯೂರಿನ ಯಾರೋ ಇಬ್ಬರು ವೈಷ್ಣವರು ಇಬ್ಬರು ದೇವರೆದುರು ಕೆಲವು ಪಾಶುರಗಳನ್ನು ಹಾಡಿದ್ದನ್ನು ಕೇಳಿದರು. ಆ ಹಾಡುಗಳಲ್ಲಿ ಇಂಪು ತುಂಬಿದ್ದಿತು. ಮಾತುಗಳಲ್ಲಿ ಸೊಬಗಿದ್ದಿತು. ಸಾಹಿತ್ಯದಲ್ಲಿ ಭಾವಪುಷ್ಟಿಯಿದ್ದಿತು. ಭಕ್ತಿಯ ಹೊನಲು ಸೇರಿದ್ದದ್ದು ಕೂಡಲೇ ತಿಳಿಯುತ್ತಿತ್ತು. ಆ ಹಾಡುಗಳನ್ನು ರಚಿಸಿದವರು ಯಾರು ಎಂದೂ ಮತ್ತು ಇತರ ಹಾಡುಗಳನ್ನು ಹಾಡುವಂತೆಯೂ ಅವರನ್ನು ಕೇಳಿಕೊಂಡರು. ಆಗ ಅವುಗಳನ್ನು ಹಾಡಿದ ವೈಷ್ಣವರು ಆ ಹಾಡುಗಳ ರಚನೆ ಮಾಡಿದವರು ನಮ್ಮಾಳ್ವಾರರು ಎಂದೂ, ಅವುಗಳನ್ನು ತಾವು ತಿರುಕ್ಕುಡಂದೈ ಎಂಬ ಊರಿನ ಆರಾವಮುದನ್ ದೇವರ ಸನ್ನಿಧಿಯಲ್ಲಿ ಯಾರೋ ಹಾಡುತ್ತಿದ್ದಾಗ ಕೇಳಿ ಕಲಿತದ್ದಾಗಿಯೂ ತಿಳಿಸಿದರು. ಹೀಗೆ ನಾಥಮುನಿಗಳ ಹೃದಯವನ್ನು ಸೆಳೆದ ಪಾಶುರ 'ಆರಾವಮುದೇ' ಎಂದು ಆರಂಭವಾಗುತ್ತದೆ. ಆ ಪಾಶುರಗಳ ಬೆನ್ನಟ್ಟಿ ನಾಥಮುನಿಗಳು ಕುಂಭಕೋಣಕ್ಕೆ ಹೋದರು. ಅಲ್ಲಿ ತಿರುಕ್ಕುಡಂದೈ ಗುಡಿಯಲ್ಲಿ ಅವರಿಗೆ ಹತ್ತು ಪಾಶುರಗಳು ದೊರೆತವು. ಅಲ್ಲಿಂದ ಅವರು ನಮ್ಮಾಳ್ವಾರರ ತೌರೂರಾದ ಆಳ್ವಾರ್ ತಿರುನಗರಿಗೆ (ತಿರುಕ್ಕುರುಹೂರ್) ಹೋಗಿ ಮಧುರಕವಿ ಆಳ್ವಾರರನ್ನು ಸೇವಿಸಿದ್ದ ಪರಾಂಕುಶದಾಸರೆಂಬುವವರನ್ನು ಕಂಡರು. ಅವರಿಗೆ ನಮ್ಮಾಳ್ವಾರರ ಪಾಶುರಗಳೆಲ್ಲ ತಿಳಿದಿರಲಿಲ್ಲ. ಮಧುರಕವಿ ಆಳ್ವಾರರು ರಚಿಸಿದ್ದ 'ಕಣ್ಣಿನುಣ್ ಶಿರುತ್ತಾಂಬು' ಮಾಲೆಯ 11 ಪಾಶುರಗಳನ್ನು ತಿಳಿಸಿಕೊಟ್ಟು ನಮ್ಮಾಳ್ವಾರರ ಅನುಗ್ರಹವಾಗುವ ಮಾರ್ಗವನ್ನು ಸೂಚಿಸಿದರು. ಅದರಂತೆಯೇ ಧ್ಯಾನಮಗ್ನರಾದ ನಾಥಮುನಿಗಳ ಎದುರಿಗೆ ನಮ್ಮಾಳ್ವಾರರು ದಿವ್ಯಚೇತನವಾಗಿ ಕಾಣಿಸಿಕೊಂಡು ತಾವೇ ರಚಿಸಿದ್ದ ತಿರುವಾಯ್‌ಮೊಳಿ (ಸಿರಿಬಾಯ ನುಡಿ)ಯ ಒಂದು ಸಾವಿರ ಪಾಶುರಗಳನ್ನು ತಿಳಿಯ ಹೇಳಿದರು. ಅದು ಸಾಮವೇದದ ಸಾರ ವೆಂದೂ ಉಪನಿಷತ್ ಸಮಾನವೆಂದೂ ಅನುಗ್ರಹಿಸಿದರು.

ಭಕ್ತಾಮೃತಂ ವಿಶ್ವಜನಾನು ಮೋದನಂ
ಸರ್ವಾರ್ಥದಂ ಶ್ರೀ ಶಠಗೋಪ ವಾಙ್ಮಯಂ
ಸಹಸ್ರ ಶಾಖೋಪನಿಷತ್ಸಮಾಗಮಂ
ನಮಾಮ್ಯಹಂ ದ್ರವಿಡ ವೇದ ಸಾಗರಂ

-ಹೀಗೆಂದು ಗುರು ಚರಿತ್ರೆ ಹೇಳುತ್ತದೆ.

ನಾಥಮುನಿಗಳು ಹಾಗೆಯೇ ಕಷ್ಟಪಟ್ಟು ಉಳಿದ ಪ್ರಬಂಧ ಪದ್ಯಗಳನ್ನು ಶೇಖರಿಸಿದರು. ಶ್ರೀರಂಗದಲ್ಲಿ ತಿರುಮಂಗೈ ಆಳ್ವಾರರ ಕಾಲದಿಂದ ಈಚೆಗೆ ನಿಂತುಹೋಗಿದ್ದ ತಿರುವಧ್ಯಯ ನೋತ್ಸವವನ್ನು ಪುನಃ ಏರ್ಪಡಿಸಿ ಪ್ರಬಂಧಗಳಿಗೆ ರಾಗಸ್ವರ ಹಾಕಿ ಹಾಡುವುದನ್ನು ಪ್ರಾಚುರ್ಯಕ್ಕೆ ತಂದು ಅವುಗಳ ನರ್ತನಕ್ಕೂ ಏರ್ಪಾಡು ಮಾಡಿದರು. ಅರೈಯರ್ ಸೇವೆ ಎಂಬ ವಿಶಿಷ್ಟನರ್ತನ ಕ್ರಮವನ್ನು ಏರ್ಪಡಿಸಿ, ನಿರಂತರವಾಗಿ ಶ್ರೀರಂಗದಲ್ಲಿಯೂ ಮಿಕ್ಕ ಎಡೆಗಳ ಎಲ್ಲ ವೈಷ್ಣವ ಆಲಯಗಳಲ್ಲಿಯೂ, ಇಂದಿಗೂ ನಡೆದುಕೊಂಡು ಬರುವಂತೆ ಮಾಡಿದರು ಎಂದು ಇತಿಹಾಸ ಹೇಳುತ್ತದೆ. ಈ ಆಚಾರ್ಯರ ಕಾಲಕ್ಕೇ ಇವು ದೊರೆಯದೆ ಹೋದರೆ, ಈ ಪ್ರಬಂಧಗಳು ಬಹು ಪ್ರಾಚೀನವೇ ಆಗಿರಬೇಕು. ಶ್ರೀ ವೈಷ್ಣವ

ಬ್ರಾಹ್ಮಣ ಸಮೂಹವು 9ನೇ ಶತಮಾನದಷ್ಟು ಹಿಂದೆಯೇ ಈ ದ್ರಾವಿಡ ಪ್ರಬಂಧಗಳನ್ನು ತಮಿಳು ವೇದವೆಂದು ಒಪ್ಪಿ ಸಂಸ್ಕೃತ ವೇದವನ್ನೂ ಇವುಗಳ ಸಮಸಮನೆ ಆದರಿಸಿ ಪಠಿಸುತ್ತ ಬಂದಿದ್ದಾರೆ. ಉಭಯ ವೇದಾಂತಿಗಳೆಂಬ ಗೌರವಕ್ಕೆ ಪಾತ್ರರಾಗಿದ್ದಾರೆ. ಈ ಸಂಪ್ರದಾಯ 9 ನೆಯ ಶತಮಾನಕ್ಕೂ ಹಳೆಯದು ಎಂಬುದಮೇಲೆ ತಮಿಳು ಸಂಘಂ ಸಾಹಿತ್ಯಕ್ಕೂ ಪೂರ್ವದ್ದು. (ಶಂಗಕಾಲ ಮತ್ತು ತಮಿಳು ಸಮಯಂ - ಕೃಷ್ಣಸ್ವಾಮಿ ಅಯ್ಯಂಗಾರ್, ತಿರುಚ್ಚಿರಪ್ಪಳ್ಳಿ).

ಆಳ್ವಾರರ ಕವಿತೆಗಳಲ್ಲಿ ಗೇಯ ಗುಣವು ಪ್ರಧಾನವಾಗಿದೆ. ಜನರು ಅವುಗಳನ್ನು ವಿವಿಧ ತೀರ್ಥಕ್ಷೇತ್ರಗಳಲ್ಲಿ, ಉತ್ಸವ ಸಂದರ್ಭಗಳಲ್ಲಿ, ಅರ್ಚಾಮೂರ್ತಿಗಳೆದುರು ಹಾಡಿಕೊಳ್ಳುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ. ಈ ಕವಿತೆಗಳ ಹಿರಿಮೆಯನ್ನು ಪಂಡಿತವರ್ಗ ಕಂಡುಕೊಂಡುದು ಶ್ರೀವೈಷ್ಣವ ಸಂಪ್ರದಾಯದ ಆಚಾರ್ಯರಾದ ನಾಥಮುನಿಗಳ ಮೂಲಕ. ಹೀಗೆ ಈ ಕವಿತೆಗಳು ಉಳಿದುಕೊಂಡು ಬಂದಿವೆ. ಈ ಕವಿತೆಗಳನ್ನು - ದಿವ್ಯಪ್ರಬಂಧಗಳನ್ನು - ತಿರುಪಾಶುರಗಳನ್ನು ಮೊದಲು ಪುರಾತನ ತಮಿಳು ಸಂಗೀತದ ಪಣ್ (ರಾಗ)ಗಳಲ್ಲಿ ಹಾಡುತ್ತಿದ್ದರು. ಆದರೆ ಕಾಲಪ್ರಭಾವದಿಂದ ಈ ಹಾಡುವ ಪದ್ಧತಿ ಬಹುತೇಕ ಖಿಲವಾಗಿದೆ. ಈಗ ಇವುಗಳನ್ನು ಏನೋ ಒಂದು ಧಾಟಿಯಲ್ಲಿ ಪಠಣಮಾಡುತ್ತಾರೆ. ಸಾಹಿತ್ಯದ ಉಚ್ಚಾರಣೆ ಸ್ಪಷ್ಟವಾಗಿರುವುದಿಲ್ಲ. ಅಥವಾ ತಮ್ಮ ಮನಸ್ಸಿನ ಇಷ್ಟದಂತೆ ಅಥವಾ ಶಾರೀರಕ್ಕೆ ತಕ್ಕಂತೆ ಹಾಡುತ್ತಾರೆ. ಪೂರ್ವದಲ್ಲಿ ಪ್ರಬಂಧಗಳನ್ನು ಹಾಡುತ್ತಿದ್ದ ಪಣ್ (ರಾಗ)ಗಳು ಮತ್ತು ಅವುಗಳಗೆ ಸಮಾನವಾದ ಈಗಿನ ರಾಗಗಳಾವುವು ಎಂಬುದನ್ನು ತಿಳಿಯುವುದೇ ಈ ಲೇಖನದ ಉದ್ದೇಶ.

ವೈಷ್ಣವ ಆಳ್ವಾರರೂ ಶೈವ ನಾಯನ್ಮಾರರೂ ಸಮಕಾಲೀನರಾಗಿದ್ದರು. ಅವರುಗಳ ಮುಖದಿಂದ ಬಂದ ಸಿರಿಬಾಯಿನುಡಿಗಳೂ ತೇವಾರಗಳೂ ಭಕ್ತಿಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿ ಮಧ್ಯಯುಗದಲ್ಲಿ ಹಿಂದೂ ಧರ್ಮದ ಪುನರುತ್ಥಾನ ಗೊಳಿಸಿದವು. ಈ ಕಾಲವನ್ನು ಪಣ್ ಇಶೈ - ಪಣ್ ಸಂಗೀತದ ಸುವರ್ಣಯುಗವೆನ್ನಬಹುದು.

ನಾಲ್ಕು ಸಾವಿರ ಪ್ರಬಂಧಗಳನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಪ್ರತಿಯೊಂದರಲ್ಲಿಯೂ 1000 ಪಾಶುರಗಳಿವೆ. ಮೂರನೆಯ ಭಾಗವು ಪಠಿಸಲು ಮಾತ್ರ ಎಂದು ಪರಿಗಣಿಸಿದ್ದಾರೆ. ಕೊನೆಯ 1000 ಪಾಶುರಗಳು - ತಿರುವಾಯಿಮೊಳಿ (ಸಿರಿಬಾಯಿನುಡಿ) ಎಂಬ ಹೆಸರುಳ್ಳ ನಮ್ಮಾಳ್ವಾರರ ಪಾಶುರಗಳನ್ನು ಒಳಗೊಂಡಿದೆ. ಎರಡನೆಯ ಸಾವಿರದ ಪಣ್‌ಗಳು ಇತ್ತೀಚೆಗೆ ತಿಳಿದು ಬಂದಿವೆ. ಮೊದಲ ಸಾವಿರದ ಪಣ್‌ಗಳು ಯಾವುವು ಎಂಬುದು ತಿಳಿದುಬಂದಿಲ್ಲ. ಆದರೂ ಅವುಗಳನ್ನೂ ಹಾಡುತ್ತಿದ್ದರು ಎನ್ನಲು ಆಧಾರಗಳಿವೆ. ಈ ಪ್ರಬಂಧಗಳನ್ನು ಇಂಪಾದ ರಾಗಗಳಲ್ಲಿ ಹಾಡುತ್ತಿದ್ದರು ಎಂದು ತಿಳಿದುಬರುತ್ತದೆ. ಆದರೆ ಈ ಪ್ರಬಂಧಗಳ ಪಣ್‌ಗಳನ್ನು ಗುರುತಿಸಬೇಕಾಗಿದೆ.

ಈ ಪ್ರಬಂಧಗಳನ್ನು ಹಾಡುತ್ತಿದ್ದ ಪಣ್‌ಗಳು ಯಾವುವೆಂದರೆ - 1) ಪಾಲೈಯಾಳ್, 2) ತೋಟಿ, 3) ಟಕ್ಕರಾಗಂ, 4) ಪೂರಾಣಿಮೈ, 5) ಪಂಚಮಂ, 6) ನಟ್ಟಪ್ಪಾಡೈ, 7) ಅಂದಾಳಿ, 8) ಗಾಂದಾರಂ, 9) ಶೆರುಟಿ, 10) ಪರ್ಣಶುಕಂ, 11) ಪಳಂಪಂಜುರಂ, 12) ಮೇಘರಾಗ ಕುರಿಂಜಿ, 13) ಕೌರವಂ, 14) ಪಳಂಟಕ್ಕ, 15) ಮುತಿರ್‌ನ್ದ ಕುರಿಂಜಿ, 16) ಕುರಿಂಜಿ, 17) ನಟ್ಟರಾಗಂ, 18) ವ್ಯಾಳಕ್ಕುರಿಂಜಿ, 19) ಶೆಂದುಕುಟ್ಟಿ, 20) ಟಕ್ಕೈಶಿ, 21) ಕೊಲ್ಲ, 22) ಇಂಡಳಂ, 23) ಕೌಶಿಕಂ, 24) ಪೇಯಂಡೈ ಕ್ಕಂದರಂ, 25) ಶೇಕಾಮರಂ, 26) ಕುರಂಟಿ. 27) ವಿಜಯಂಟಮ್, 28) ನಾಟ್ಟಂ.

ಈ ಇಪ್ಪತ್ತೆಂಟು ಪಣ್‌ಗಳನ್ನು ಪುರಾತನ ತಮಿಳು ಸಂಗೀತದ 103 ಪಣ್‌ಗಳಲ್ಲಿ ಗುರುತಿಸಬಹುದು.

ತೇವಾರಗಳಲ್ಲಿ 21 ಮೇಳಗಳನ್ನು ಬಳಸಲಾಗುತ್ತಿತ್ತು. ಈ ಪಣ್‌ಗಳ ನೆರವಿನಿಂದ ಪ್ರಬಂಧಗಳ ರಾಗಗಳನ್ನು ಗುರುತಿಸಬಹುದು. ಕಾಲಾನುಕ್ರಮದಲ್ಲಿ ಪಣ್‌ಗಳ ಹೆಸರುಗಳು ರಾಗಗಳ ಹೆಸರುಗಳಾಗಿ ಬದಲಾವಣೆ ಹೊಂದಿವೆ. ಆದರೂ ಓದುವರ್ ಪರಂಪರೆಯಲ್ಲಿ ತೇವಾರಗಳ ಪಣ್‌ಗಳು ಉಳಿದುಕೊಂಡು ಬಂದಿರುವುದು ನಮ್ಮ ಭಾಗ್ಯ. ಹಿಂದಿನ 103 ಪಣ್‌ಗಳಲ್ಲಿ 24 ಪಣ್‌ಗಳು ಮಾತ್ರ ಉಳಿದಿವೆ. ಇವುಗಳಲ್ಲಿ ಕೆಲವು ಪಣ್‌ಗಳು ಪ್ರಬಂಧಗಳಲ್ಲಿ ಕಂಡುಬರುವುದಿಲ್ಲ. ಹಾಗೆಯೇ ಪ್ರಬಂಧಗಳಲ್ಲಿನ ಕೆಲವು ಪಣ್‌ಗಳು ತೇವಾರಗಳಲ್ಲಿ ಕಂಡುಬರುವುದಿಲ್ಲ. ಇವುಗಳಲ್ಲಿ ಸುಮಾರು 20 ಪಣ್‌ಗಳನ್ನು ಪ್ರಬಂಧ ತೇವಾರಗಳಲ್ಲಿ ಗುರುತಿಸಬಹುದು. ಪಣ್‌ಗಳ ಇಂದಿನ ರಾಗದ ಹೆಸರುಗಳು ಮೇಳಸಂಖ್ಯೆಯನ್ನು ಪ್ರತ್ಯೇಕವಾದ ಪಟ್ಟಿಯಲ್ಲಿ ನೀಡಲಾಗಿದೆ.

ಆ ಕಾಲದಲ್ಲಿ ಪಣ್‌ಗಳನ್ನು ಮೂರು ವಿಧವಾಗಿ ವರ್ಗೀಕರಿಸಲಾಗಿದ್ದಿತು. 1,2,3,4, 8,10,11,19,21,22,23, - ಈ ಪಣ್‌ಗಳು ಹಗಲಿನ ರಾಗಗಳು. 5,6,7,14,15,16,17,18 ಈ ಪಣ್‌ಗಳು ರಾತ್ರಿಯ ಪಣ್‌ಗಳು. ಮಿಕ್ಕವನ್ನು ಎಲ್ಲ ವೇಳೆಯಲ್ಲಿಯೂ ಬಳಸಬಹುದಾಗಿದ್ದಿತು. ತೇವಾರಂ ಮತ್ತು ದಿವ್ಯಪ್ರಬಂಧಗಳು ಮುಂದೆ ಸಿದ್ಧರ್ ಪಾಡಲ್ ಎಂಬ ಜಾನಪದ ಗೀತೆಗಳ ಹುಲುಸಾದ ಬೆಳೆಗೆ ಸ್ಫೂರ್ತಿದಾಯಕವಾದವು.

ಇಲ್ಲಿ ತಯಾರಿಸಲಾಗಿರುವ ಪಟ್ಟಿಯಲ್ಲಿ ತೇವಾರಂ ಮತ್ತು ಪ್ರಬಂಧಗಳ ಪಣ್‌ಗಳನ್ನು, ಅವುಗಳಿಗೆ ಸಮನಾದ ಈಗಿನ ರಾಗಗಳನ್ನೂ, ಅವು ಯಾವ ಮೇಳಕರ್ತಕ್ಕೆ ಸೇರಿದವೆಂಬುದನ್ನು ತಿಳಿಸಲಾಗಿದೆ. ಈ ಪಣ್‌ಗಳಲ್ಲಿ ರಚಿಸಿದ ಪ್ರಬಂಧಗಳನ್ನು ಗುರುತಿಸಲು, ಸಾಧ್ಯ ಮತ್ತು ಅವುಗಳಿಗೆ ಸಮನಾದ ತೇವಾರ್ ಪಣ್ ಇಶೈಗೆ (ತೇವಾರ್ ರಾಗಗಳು) ಅವುಗಳ ಅರ್ಥ ಭಾವಗಳನ್ನು ಅರಿತು ಅಳವಡಿಸಿ ಹಾಡಬಹುದು.

ಗುರುಪರಂಪರೆ ಮತ್ತು ದಿವ್ಯಸೂರಿ ಚರಿತೆಯಲ್ಲಿ ತಿಳಿಸಿರುವಂತೆ ಜ್ಞಾನಸಂಬಂಧರ್ ಮತ್ತು ತಿರುಮಂಗೈ ಆಳ್ವಾರ್ - ಇವರಿಬ್ಬರೂ ಭೇಟಿಯಾಗಿದ್ದರು. ಆಳ್ವಾರರು ಶೀರ್ಕಾಳಿಯಲ್ಲಿ ಹಾಡಿದ ಪಾಶುರಗಳನ್ನು ಸಂಬಂಧರ್ ಬಹುದಾಗಿ ಮೆಚ್ಚಿಕೊಂಡಿದ್ದರು, ಎಂದು ತಿಳಿದುಬರುತ್ತದೆ. ಸಂಬಂಧರ್, ಅಪ್ಪರ್ ಮತ್ತು

ತಿರುಮಂಗೈ ಆಳ್ವಾರ್ - ಇವರುಗಳು ಸಮಕಾಲೀನರು ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಅವರು ತಮ್ಮ ರಚನೆಗಳಿಂದ ಪರಸ್ಪರ ಪ್ರಭಾವಿತರಾಗಿದ್ದರು ಎಂದು ನಿಸ್ಸಂದೇಹವಾಗಿ ಹೇಳಬಹುದು.

ತೇವಾರಂಗಳಲ್ಲಿ ಕಟ್ಟಳೈಗಳನ್ನು ಹೇಳಿರುವಂತೆ ಪ್ರಬಂಧಗಳಲ್ಲಿ ಒತ್ತುಗಳನ್ನು ಹೇಳಿದೆ. ಇದು ಹಾಡಿನ ತಾಳದ ಲಯವನ್ನು ಸೂಚಿಸುತ್ತದೆ. ಇವುಗಳನ್ನು ಕುರಿತು ಸಂಶೋಧನೆ ಮಾಡಿದಲ್ಲಿ ಪ್ರಬಂಧಗಳ ಪಣ್ ಇಶೈ - ಪಣ್ ಸಂಗೀತದ ಮೇಲೆ ಹೆಚ್ಚು ಬೆಳಕು ಚೆಲ್ಲಲು ಸಾಧ್ಯ. ತೇವಾರಂಗಳನ್ನು ಈಗ ಸಾಮಾನ್ಯವಾಗಿ ಆದಿ, ತ್ರಿಶ್ರ, ತ್ರಿಪುಟ ಮತ್ತು ರೂಪಕ ತಾಳಗಳಲ್ಲಿ ಹಾಡುತ್ತಾರೆ. ಪ್ರಬಂಧಗಳ ಛಂದಸ್ಸನ್ನು ಅನುಸರಿಸಿ, ಅವುಗಳನ್ನು ಈ ತಾಳಗಳಲ್ಲಿ ಹಾಡಬಹುದು. ಕರ್ನಾಟಕ ಸಂಗೀತದ ಧ್ರುವತಾರೆಯಂತಿದ್ದ ಅರಿಯಕ್ಕುಡಿ ರಾಮಾನುಜ ಅಯ್ಯಂಗಾರ್ಯರು ತಿರುಪ್ಪಾವೈನ ಮೂವತ್ತು ಪಾಶುರಗಳನ್ನು ಸುಂದರವಾದ ರಾಗಗಳಲ್ಲಿ ಸ್ವರಪಡಿಸಿ ಹಾಡಿ ಪ್ರಚಾರಕ್ಕೆ ತಂದು ಶಾಶ್ವತವಾದ ಸೇವೆ ಸಲ್ಲಿಸಿದ್ದಾರೆ ಎಂಬುದನ್ನು ನೆನೆಯಬಹುದು.

ಹದಿನೆಂಟನೆಯ ಶತಮಾನದಲ್ಲಿ ತಿರುವಾರೂರಿನ ಗುರುಸ್ವಾಮಿ ದೇಶಿಕರ್ ಎಂಬ ಸಂಗೀತ ವಿದ್ವಾಂಸರು ಶಿವದೇವಾಲಯಗಳಲ್ಲಿ ತೇವಾರಂಗಳನ್ನು ಹಾಡುವ ಸಂಪ್ರದಾಯವನ್ನು ಪುನರುಜ್ಜೀವನಗೊಳಿಸಿದರು. ಇದು ಸಂಪೂರ್ಣವಾಗಿ ಖಿಲವಾಗುವ ಮುನ್ನ ಹಿಂದಿನ ಜಾಡನ್ನು ಅನುಸರಿಸಿ, ಮದರಾಸಿನ ತಮಿಳು ಇಶೈಸಂಘವು 1949 ರಿಂದ ಇದನ್ನು ಪುನರುಜ್ಜೀವನಗೊಳಿಸಿ ಭದ್ರವಾದ ನೆಲೆಯ ಮೇಲೆ ನಿಲ್ಲಿಸಲು ಪ್ರಯತ್ನಿಸುತ್ತಿದ್ದು, ಇದು ಈಗಾಗಲೇ ಉತ್ತಮ ಫಲ ನೀಡತೊಡಗಿದೆ.

ಆದರೆ ನಾಥಮುನಿಗಳು ನೆಲೆಗೊಳಿಸಿದ ದಿವ್ಯಪ್ರಬಂಧಗಳನ್ನು ಹಾಡುವ ಪರಂಪರೆ ಈಗ ಖಿಲವಾಗಿದೆ. ಹಿಂದೆ ಯಾವ ರಾಗಗಳನ್ನು ಯಾವ ರೀತಿ ಹಾಡುತ್ತಿದ್ದರು ಎಂಬುದನ್ನು ತಿಳಿಯುವುದು ಕಷ್ಟ. ತೇವಾರಂಗಳ ಹಾಡುವಿಕೆಯನ್ನು ಪುನರುಜ್ಜೀವನಗೊಳಿಸಿದಂತೆ ಪ್ರಬಂಧಗಾನವನ್ನು ಹಿಂದೆ ಯಾವ ರೀತಿಯ ಸಂಪ್ರದಾಯದಲ್ಲಿ ಹಾಡುತ್ತಿದ್ದರು - ಎಂಬುದನ್ನು ಅರಿತು ಪ್ರಚಾರಮಾಡಲು ಸಂಶೋಧನೆ ಹಾಗೂ ಆಂದೋಲನ ಅಗತ್ಯವಿದೆ. ★

# ಪಣ್ - ರಾಗ - ಮೇಳ ಪಟ್ಟಿಕೆ

ತೇವಾರಂ ಹಾಗೂ ಪ್ರಬಂಧಗಳನ್ನು ಪಣ್‌ಗಳಲ್ಲಿ ಹಾಡಲಾಗುತ್ತಿದ್ದಿತು. ಈ ಪಣ್‌ಗಳು 103 ಇದ್ದರೂ ಅವುಗಳಲ್ಲಿ 24 ಪಣ್‌ಗಳನ್ನು ಬಳಸಿರುವುದು ಕಂಡುಬರುತ್ತವೆ. ಅವುಗಳಿಗೆ ಸಮನಾದ ಇಂದಿನ ರಾಗಗಳು ಅವುಗಳ ಮೇಳಸಂಖ್ಯೆಯನ್ನು ಹೀಗೆ ಪಟ್ಟಿಮಾಡಲಾಗಿದೆ.

| ಸಂ. | ಪಣ್ | ರಾಗ | ಮೇಳಸಂಖ್ಯೆ |
|---|---|---|---|
| 1. | ಗಾಂಧಾರಂ | ಗಾಯಕಪ್ರಿಯ | 13 |
| 2. | ಪಿಯಂಧೈಕ್ಕಂದರಂ | ಗಾಯಕಪ್ರಿಯ | 13 |
| 3. | ಇಂಡಲಂ | ಲಲಿತ ಪಂಚಮಂ (ಮಾಯಾಮಾಳವ ಗೌಳ) | 14 |
| 4. | ಪಂಚಮಂ | ಅಹಿರಿ | 14 |
| 5. | ಶೀಕಾಮರಂ | ನಾದನಾಮಕ್ರಿಯ | 15 |
| 6. | ಕುರಿಂಜಿ | ಮಲಹರಿ | 15 |
| 7. | ವ್ಯಾಳ ಕುರಿಂಜಿ | ಸೌರಾಷ್ಟ್ರ | 17 |
| 8. | ಕೌಶಿಕಂ | ಭೈರವಿ | 20 |
| 9. | ಶೆಂದುರುಟಿ | ಮಧ್ಯಮಾವತಿ | 28 |
| 10. | ನಟ್ಟಪ್ಪಾಡೆ | ನಾಟಕುರಿಂಜಿ | 28 |
| 11. | ಟಕ್ಕೇಶಿ | ಕಾಂಭೋಜಿ | 28 |
| 12. | ಶೆವ್ವಾಯಿ | ಯದುಕುಲ ಕಾಂಬೋಜಿ | 28 |
| 13. | ಪಂಜರಂ | ಕೇದಾರಗೌಳ | 28 |
| 14. | ಕೊಲ್ಲಿ | ಸಿಂಧು ಕನ್ನಡ | 28 |
| 15. | ಕೊಲ್ಲಿಕೌವನಂ | ಸಿಂಧು ಕನ್ನಡ/ನವರೋಜ್ | 28 |
| 16. | ಟಕ್ಕರಾಗಂ | ಕಾಂಭೋಜಿ | 28 |
| 17. | ಪಯಂಟಕ್ಕ | ಶುದ್ಧಸಾವೇರಿ | 29 |
| 18. | ಮೇಘರಾಗ ಕುರಿಂಜಿ | ನೀಲಾಂಬರಿ | 29 |
| 19. | ಪಯಂ ಪಂಜುಳ | ಶಂಕರಾಭರಣ | 29 |
| 20. | ಅಂದಾಳ ಕುರಿಂಜಿ | ಶೈಲಿದೇಶಾಕ್ಷಿ | 35 |
| 21. | ಪುರನೀರ್ಮೈ | ಶ್ರೀಕಂಠಿ | 46 |
| 22. | ಸಾದಾರಿ | ಪಂತುವರಾಳಿ | 51 |
| 23. | ನಟ್ಟರಾಗಂ | ಪಂತುವರಾಳಿ | 51 |
| 24. | ತಿರುತ್ತಾಂಡಕಂ | ಬೇಗಡೆ | 29 |
| 25. | ಕಾಂತಾರಂ | ನವರೋಜ್ | 29 |
| 26. | ಕಾಂತಾರ ಪಂಚಕಂ | ಕೇದಾರಗೌಳ | 28 |

## ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ.

ತಿ. ತಿ. ದೇವಸ್ಥಾನಗಳು ನಿತ್ಯವೂ ಭಕ್ತರಿಗೆ ನಿತ್ಯ ಅನ್ನದಾನಯೋಜನೆ, ಉಚಿತ ವಸತಿ, ಉಚಿತ ದರ್ಶನ, ವೈದ್ಯಸಹಾಯ, ಉಚಿತ ವಿದ್ಯೆ, ವೃದ್ಧಾಶ್ರಮ, ಅನಾಥಾಶ್ರಮ ನಿರ್ವಹಣೆ, ವಿಕಲಾಂಗರಿಗೆ ನೆರವು. ವೇದ ಸಂರಕ್ಷಣೆ, ಹಿಂದೂ ಧರ್ಮಪ್ರಚಾರ - ಮೊದಲಾದ ಧಾರ್ಮಿಕ ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡು ವಿಜಯವಂತವಾಗಿ ನಿರ್ವಹಿಸುತ್ತಿರುವ ವಿಷಯ ಎಲ್ಲರಿಗೂ ತಿಳಿದದ್ದೇ ಆಗಿದೆ.

ಭಕ್ತರು ಶ್ರೀ ವೆಂಕಟೇಶ್ವರಸ್ವಾಮಿಗೆ ನೀಡುವ ಕಾಣಿಕೆಗಳ ರೂಪದ, ವಂತಿಗೆಯ ರೂಪದ ಅಥವಾ ಸ್ವಾಮಿ ಹುಂಡಿಯಲ್ಲಿಸಮರ್ಪಿಸುವ ಹರಕೆಯ ರೂಪದ ಧನ ಕನಕ ವಸ್ತು ವಾಹನಾದಿ ರೂಪದಲ್ಲಿ ಬರತಕ್ಕ ಆದಾಯವೇ ಇದಕ್ಕೆ ಆಧಾರ.

ಆದರೆ ಭಕ್ತರು ತಾವು ಸದ್ಭಾವನೆಯಿಂದ ಮಾಡುವ ದಾನ ಸದ್ವಿನಿಯೋಗವಾಗಬೇಕೆಂಬುದೇ ನಮ್ಮ ಧ್ಯೇಯ. ಹಾಗಾಗಿ ಭಕ್ತರಲ್ಲಿ, ದಾನಿಗಳಲ್ಲಿ ಉದಾರಿಗಳಲ್ಲಿ ನಮ್ಮ ಮನವಿಯೆಂದರೆ-

ಅಯ್ಯಾ - ನೀವು ನೀಡುವ ಸ್ಥಿರಚರ ಆಸ್ತಿಗಳೆಲ್ಲ ನೀವು ಹೇಳುವಂತಹ ಸತ್ಕಾರ್ಯಗಳಲ್ಲಿ ಮಾತ್ರವೇ ವಿನಿಯೋಗವಾಗುತ್ತದೆ. ಆದರೆ ಅವೆಲ್ಲ ನಮ್ಮ ಕೈಗೆ ಸಕ್ರಮವಾಗಿ ಬಂದ ಮೇಲೆಯೇ ವಿನಿಯೋಗ ಸಾಧ್ಯವಾಗುತ್ತದೆ. ಆದ್ದರಿಂದ ತಾವು ನೀಡುವ ದಾನಗಳು ಯಾವುದೇ ರೀತಿಯ ನ್ಯಾಯ; ಪಂಚಾಯತಿಯ ಅಡ್ಡಿಗಳಿಲ್ಲದೆ, ಎಂತಹ ಷರತ್ತುಗಳೂ ಇಲ್ಲದೆ, ಯಾವುದೇ ಆಂಕ್ಷೆಗಳೂ ಇಲ್ಲದಂತೆ ಸ್ವಚ್ಛಂದವಾಗಿ, ಶ್ರೀ ವೆಂಕಟೇಶ್ವರಸ್ವಾಮಿ ಅಥವಾ ಶ್ರೀ ವೆಂಕಟಾಚಲಪತಿ - ತಿರುಪತಿ - ಇವರ ಹೆಸರಿನಲ್ಲಿ ದಾನ ಪತ್ರವನ್ನು ಅಥವಾ ಉಯಿಲು ಪತ್ರವನ್ನು ಬರೆಯಿಸಿ, ಆ ಪತ್ರವನ್ನು ತಕ್ಕ ರೀತಿಯಲ್ಲಿ ರಿಜಿಸ್ಟರು ಮಾಡಿಸಿ, ಸದರಿ ನಕಲನ್ನು ಅಥವಾ ಮೂಲಪತ್ರವನ್ನು ಈ ಕೆಳಗೆ ಸೂಚಿಸಿರುವ ವಿಳಾಸಕ್ಕೆ ಕಳುಹಿಸುವುದಾಗಲೀ, ಅಥವಾ ಹುಂಡಿಯಲ್ಲಿ ಹಾಕುವುದಾಗಲೀ ಮಾಡಿದರೆ ಸೂಕ್ತಕ್ರಮಗಳನ್ನು ಕೂಡಲೇ ತೆಗೆದುಕೊಳ್ಳಲಾಗುವುದು.

ಯಾವ ರೀತಿಯ ದಾನಪತ್ರವೂ ಬರೆಯದೆಯೇ ಮೂಲಪತ್ರವನ್ನು ಕಳುಹಿಸುವುದರಿಂದಲಾಗಲೀ, ಅವುಗಳನ್ನು ಹುಂಡಿಯಲ್ಲಿ ಹಾಕುವುದರಿಂದಲಾಗಲೀ ತಮ್ಮ ಸತ್ಸಂಕಲ್ಪ ನೆರವೇರುವುದಿಲ್ಲ.

ಇಂತು

**ಕಾರ್ಯನಿರ್ವಹಣಾಧಿಕಾರಿ,**

ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ.

ಆಸ್ತಿ ವಿಭಾಗ - ರೂಂ ನಂಬರ್ - 109, 2ನೇ ಅಂತಸ್ತು, ತಿ.ತಿ.ದೇ. ಪರಿಪಾಲನಾ ಭವನ,

ಕಪಿಲತೀರ್ಥಂ ರಸ್ತೆ, ತಿರುಪತಿ - ಚಿತ್ತೂರು ಜಿಲ್ಲೆ - **517 501.**

ದೂರವಾಣಿ - **08574 - 35789.**

## ಪ್ರಜೆಗಳಲ್ಲಿ ವಿನಂತಿ

ಸಾಧಾರಣವಾಗಿ ಹಲವಾರು ಮಂದಿ ಭಕ್ತರು ಧಾರ್ಮಿಕ ಕಾರ್ಯನಿರ್ವಹಣೆಗೆಂದು, ತಮ್ಮ ಸ್ಥಿರಚರಾಸ್ತಿಗಳನ್ನು ತಮ್ಮ ತದನಂತರವಾಗಲೀ, ತಮ್ಮ ವಾರಸುದಾರರಿಗೆ ಆಸ್ತಿಯನ್ನು ಹಂಚಿಕೊಡುವಾಗಲಾಗಲೀ, ಸ್ವಾಮಿಯ ಕೈಂಕರ್ಯಕ್ಕೆಂದು ದಾನ ಪತ್ರವನ್ನಾಗಲೀ ಉಯಿಲು ಪತ್ರವನ್ನಾಗಲೀ ಬರೆಯ ತಕ್ಕಂತಹ ಸಂದರ್ಭಗಳು ಅಸಂಖ್ಯಾತ. ಆದರೆ ವಾರಸುದಾರರ ಅಂತರ್ಗತ ಕಲಹಗಳಿಂದಲೋ, ಇಲ್ಲವೇ ಕೆಲವರ ದುರ್ಬುದ್ಧಿಯಿಂದಲೋ, ಇಲ್ಲವೇ ವಾರಸುದಾರರೇ ಇಲ್ಲದಿರುವುದರಿಂದಲೋ, ದಾನಿಗಳ ಆಸ್ತಿಗಳ ಬಗ್ಗೆ ಸರಿಯಾದ ಅಜಮಾಯಿಷಿ ಇಲ್ಲದಂತಾಗಿ, ಸ್ವಾಮಿಯ ಸೇವೆಗೆಂದು ವಿನಿಯೋಗ ಆಗಬೇಕಿದ್ದ ಸ್ಥಿರಚರ ಆಸ್ತಿಗಳು ಬಹಳಷ್ಟು ಅನ್ಯಾಕ್ರಾಂತವಾಗುತ್ತಿವೆ. ಹೀಗೆ ಆಗದಂತೆ ನೋಡಿಕೊಂಡು ಅಂತಹ ಆಸ್ತಿಪಾಸ್ತಿಗಳನ್ನು ಸತ್ಕಾರ್ಯದಲ್ಲಿ ಸಕ್ರಮವಾಗಿ ವಿನಿಯೋಗಕ್ಕೆ ತೆಗೆದುಕೊಂಡು ಬರುವ ಹೊಣೆಗಾರಿಕೆ ನಮ್ಮೆಲ್ಲರ ಮೇಲಿದೆ.

ಹೀಗಾಗಿ ತಮ್ಮ ಪರಿಸರ ಗ್ರಾಮ ಪ್ರಾಂತಗಳಲ್ಲಿ ಎಲ್ಲಿಯಾದರೂ ಸ್ವಾಮಿಯ ಕೈಂಕರ್ಯಕ್ಕೆಂದು ನಿರ್ದೇಶಿತವಾದ ಸ್ಥಿರಚರ ಆಸ್ತಿಗಳಿದ್ದಲ್ಲಿ ಅವುಗಳ ವಿವರಗಳನ್ನು ಆಧಾರ ಸಹಿತವಾಗಿ ನಮಗೆ ತಿಳಿಸಿದಲ್ಲಿ, ಅವುಗಳನ್ನು ಸ್ವಾಧೀನ ಮಾಡಿಕೊಳ್ಳಲು ತಕ್ಕ ಕ್ರಮಗಳನ್ನು ತೆಗೆದುಕೊಳ್ಳಲಾಗುವುದು.

ಇಂತಹ ಮಾಹಿತಿಯನ್ನು ನೀಡಿದವರಿಗೆ ಸ್ವಾಮಿಯ ಅನುಗ್ರಹ ತಪ್ಪದೆ ದೊರೆಯುತ್ತದೆ. ಜೊತೆಗೇ ಅವರ ವಿವರಗಳನ್ನು ಅತಿಗೋಪ್ಯವಾಗಿಡಲಾಗುವುದು.

ವಿವರಗಳಿಗೆ,

**ಆಸ್ತಿಗಳ ವಿಭಾಗ, ತಿ.ತಿ.ದೇ.,**

ಕೆ. ಟಿ. ರಸ್ತೆ, ತಿರುಪತಿ.

ದೂರವಾಣಿ - 08574 - 35789.

**ಕಾರ್ಯನಿರ್ವಹಣಾಧಿಕಾರಿ.**



# ಬ್ರಹ್ಮೋತ್ಸವಗಳಲ್ಲಿ ಬಹುಳವಾದ
# ಶ್ರೀವಾರಿ ಸೇವೆ



ತಿರುಮಲೆಯಲ್ಲಿನ ಯಾತ್ರಿಕರು ತಮ್ಮ ಸೇವೆಯ ಅಂಗವಾಗಿ ಯಾತ್ರಿಕರ ಸೇವೆಯನ್ನು ಕೈಗೊಂಡು ಕೃತಾರ್ಥರಾಗುವ ಶ್ರೀವಾರಿ ಸೇವೆ ಬ್ರಹ್ಮೋತ್ಸವದ ಹೊತ್ತಿಗೆ ಒಂದು ವರ್ಷದ ಅವಧಿಯನ್ನು ಪೂರೈಸುವಂತಾಗಿ, ಈ ಬ್ರಹ್ಮೋತ್ಸವಗಳ ಅವಧಿಯಲ್ಲಿ ಪರಾಕಾಷ್ಠತೆಯನ್ನು ಮುಟ್ಟಿದೆಯೆಂದರೆ ಆಶ್ಚರ್ಯವಿಲ್ಲವೆನ್ನಬೇಕು. ಈ ಬಾರಿಯ ಬ್ರಹ್ಮೋತ್ಸವಗಳ ಹೊತ್ತಿಗೆ ಪ್ರತಿದಿನವೂ ಐದು ನೂರು ಮಂದಿಗೆ ಕಡಿಮೆಯಿಲ್ಲದಂತೆ ಈ ಒಂದು ಸ್ವಯಂಸೇವೆಯಲ್ಲಿ ಭಾಗವಹಿಸಿದರೆಂದರೆ ಈ ಯೋಜನೆಯ ಜನಪ್ರಿಯತೆ ಹೆಚ್ಚುತ್ತಿದೆಯೆಂದು ಹೇಳಿದಂತೆ ಆಗದೇನು !

ಶ್ರೀ ಶ್ರೀ ತ್ರಿದಂಡಿ ಚಿನ್ನಜೀಯರ್ ಸ್ವಾಮಿಜೀ ಅವರ ವಿಕಾಸ ತರಂಗಿಣಿ ಕಾರ್ಯಕರ್ತರು ಇನ್ನೂರು ಮಂದಿ (ಅವರಲ್ಲಿ ಮಹಿಳೆಯರು 150 ಹಾಗೂ ಪುರುಷರು 50 ಮಂದಿ) ಬ್ರಹ್ಮೋತ್ಸವಗಳಲ್ಲಿ ಅಷ್ಟೂ ದಿನವೂ ತಿರುಮಲೆಯ ವಿವಿಧ ಕಡೆಗಳಲ್ಲಿ ಸ್ವಯಂ ಸೇವೆಯನ್ನು ನಿರ್ವಹಿಸಿದರಾದರೆ ಇನ್ನೊಂದು ಗುಂಪು ವಿಷ್ಣು ಸಹಸ್ರನಾಮ ಪಾರಾಯಣದಲ್ಲಿಯೂ ಭಾಗವಹಿಸಿತು. ಕಂಚಿಯ ಶ್ರೀ ಶ್ರೀ ಜಯೇಂದ್ರ ಸರಸ್ವತೀ ಸ್ವಾಮಿಜೀ ಅವರ ಜನಕಲ್ಯಾಣ್ ಸೇವಾದಳದ ಐವತ್ತು ಮಂದಿ ಸ್ವಯ-ಸೇವಕರು ಅಷ್ಟೂ ದಿನಗಳು ತಿರುಮಲೆಯ ವಿವಿಧ ಸ್ಥಳಗಳಲ್ಲಿ ಸ್ಫೂರ್ತಿ ದಾಯಕವಾಗಿ ಶಿಸ್ತುಬದ್ಧವಾಗಿ ಸ್ವಯಂ ಸೇವೆಯಲ್ಲಿಪಾಲುಗೊಂಡಿದ್ದರು. ಭದ್ರಾಚಲದ ಶ್ರೀರಾಮಚರಣ ಸೇವಾ ಸಂಘದವರು 24 ಮಂದಿ, ಕರ್ನೂಲು ಜಿಲ್ಲೆಯ ಶ್ರೀರಾಮಚಂದ್ರುಡು ಅವರ ವೃಂದದ ಹನ್ನೊಂದು ಮಂದಿ, ವಿಶಾಖ ಪಟ್ಟಣದ ವೆಂಕಟರಾವು ವೃಂದದ 20 ಮಂದಿ, ಮಾಚೆರ್ಲಲದ ಚೆನ್ನಕೇಶವರಾವು ಬೃಂದ - 20 ಮಂದಿ. ಒಂಗೋಲು ಶ್ರೀನಿವಾಸ ಸೇವಾಸಮಿತಿ 23 ಮಂದಿ, ತುನಿಯ ಸೋಮೇಶ್ವರರಾವು ಬೃಂದದ ಹತ್ತು ಮಂದಿ, ಹೈದರಾಬಾದಿನ ಕೆ. ಸುದರ್ಶನ ಬೃಂದದ ಹದಿಮೂರು ಮಂದಿ, ಪ್ರತಿವಾರವೂ ಸ್ವಯಂ ಸೇವಕರ ತಂಡ ಬರುವಂತಹ ಚೆನ್ನೈನ ಶ್ರೀವಾರಿ ಸೇವಾಸಮಿತಿಯ ವತಿಯಿಂದ ಬ್ರಹ್ಮೋತ್ಸವ ಗಳಿಗೆಂದು ಐವತ್ನಾಲ್ಕು ಮಂದಿ (32 ಪುರುಷರು 22 ಮಹಿಳೆಯರು) ಆಗಮಿಸಿದ್ದರು. ಇವರುಗಳ ಜೊತೆಗೇ ತಿರುಪತಿಯ ಎಸ್.ಜಿ.ಎಸ್. ಕಾಲೇಜು, ಎಸ್.ವಿ. ಜೂನಿಯರ್ ಕಾಲೇಜು ಸುಮಾರು ನೂರಕ್ಕೂ ಹೆಚ್ಚಿನ ಮಂದಿ ವಿದ್ಯಾರ್ಥಿಗಳು ಸ್ವಯಂಸೇವೆಯ ಜವಾಬ್ದಾರಿಯನ್ನು ಹೊತ್ತು ನಡೆದಿದ್ದರು.

ಈ ಬಾರಿ ಬ್ರಹ್ಮೋತ್ಸವಗಳಲ್ಲಿ ಸರದಿಯ ಸಾಲು ಅಧಿಕ. ಅದಕ್ಕಾಗಿ ವಿವಿಧ ಕಡೆಯ ಹೆಚ್ಚಿನ ಸಂದಣಿಯನ್ನು ನಿಭಾಯಿಸಲು ಈ ಸ್ವಯಂಸೇವಕ ಪಡೆ ಸಮಯೋಚಿತವಾಗಿ ಒದಗಿ ಬಂದಿತು. ಅನ್ನದಾನಂ ಕಾಂಪ್ಲೆಕ್ಸ್‌ನಲ್ಲಿ ಹೆಚ್ಚಿನ ಮಂದಿಗೆ ಅಡುಗೆಯ ಏರ್ಪಾಡು ನಡೆದಿದ್ದವು. ದಿನಕ್ಕೆ ಮೂವತ್ತು ಸಾವಿರಮಂದಿಯ ಭೋಜನ. ಅದಕ್ಕೆ ಹೆಚ್ಚಿನ ತರಕಾರಿ, ಹೆಚ್ಚಿನ ಪರಿಚಾರಕ ಪಡೆಯೇಬೇಕು. ಶ್ರೀವಾರಿ ಸೇವೆಯ ಸ್ವಯಂ ಸೇವಕರು ಎರಡೆರಡು ಷಿಫ್ಟ್‌ಗಳಲ್ಲಿಯೂ ಕೆಲಸ ಮಾಡಿದರು. (ಒಂದು ಷಿಫ್ಟ್‌ನ ಅವಧಿ ನಾಲ್ಕು



ಗಂಟೆ.) ಎರಡನೆಯ ಬಾರಿ ಬಡಿಸುವುದಕ್ಕೆ ಬಂದಾಗಲೂ ಮೊದಲಿನ ಉತ್ಸಾಹವೇ ತುಂಬಿ ತುಳುಕಿದ್ದಿತು. 'ದೇವರೇ ಸೇವೆಯನ್ನು ಪಡೆಯುವವನು. ಅವನು ನೀಡಿದ ಶಕ್ತಿಯನ್ನು ಅವನ ಸೇವೆಯಲ್ಲಿಯೇ ವೆಚ್ಚಿಸುವುದರಿಂದ ನಮಗೆ ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣುವ ಭಾಗ್ಯ' ಕನ್ನಡದ ಕೀರ್ತನೆಯ ಸಾರವನ್ನು ತೆಲುಗಿನಲ್ಲಿ ಹೇಳುವ ಮಾಚೆರ್ಲದ ಚೆನ್ನಕೇಶವರಾಯರ ಮಾತು ಅತ್ಯಂತ ಅರ್ಥಪೂರ್ಣವಾಗಿದ್ದಿತು. ಅವರೊಂದಿಗಿದ್ದ ಹತ್ತೊಂಬತ್ತು ಮಂದಿಯೂ ಅದೇ ಆದರ್ಶದ ಆಲೋಚನೆ ಹೊತ್ತು ಕೆಲಸಮಾಡುತ್ತಿದ್ದರು. ಅವರುಗಳು ಸರದಿಯ ಸಾಲಿನಲ್ಲಿ ಪುಳಿಯೋಗರೆ ಪೊಟ್ಟಣ ಹಂಚುವ ಕೆಲಸ ಮಾಡುತ್ತಿದ್ದರು. ಎಲ್ಲರನ್ನೂ ಮಾತನಾಡಿಸಿ, ಎಲ್ಲರಿಗೂ ಉಪಚಾರ ಮಾಡುತ್ತ ಅದನ್ನು ಬಳಸುವ ರೀತಿಯನ್ನೂ ಹೇಳುತ್ತ ನಡೆದಿತ್ತು ಅವರ ಕಾಯಕ.

ಅಡುಗೆಯ ಸಾಲಿನಲ್ಲಿ ತರಕಾರಿಯ ಬೆಟ್ಟವನ್ನು ಕಡಿಯುತ್ತ ಹುಳುಕು, ನಾರು, ಬಿಡಿಸಿ ಒಪ್ಪವಾಗಿ ಕಾಯಿ ಪಲ್ಲೆಗಳನ್ನು ಹಚ್ಚಿಕೊಟ್ಟು ಅದನ್ನು ದೊಡ್ಡ ಗಂಗಾಳದ ನೀರಿನಲ್ಲಿ ತೊಳೆದು ಶುಭ್ರಗೊಳಿಸುತ್ತ ಕಾಯಕ ನಡೆದಿದ್ದರೂ ಮನಸ್ಸು ಅನ್ನಮಾಚಾರ್ಯರ ಗೀತೆ ಹಾಡುತ್ತಿದ್ದಂತೆ ಬುಲ್ಲಿಪಾಡು ಸತ್ಯನಾರಾಯಣ ವೃಂದದ ಹತ್ತು ಮಂದಿಗೆ ಇದೊಂದು ಸೇವೆಯ ಸುವರ್ಣಾವಕಾಶ. 'ಮತ್ತೆ ಸಿಗುವುದೋ ಇಲ್ಲವೋ ಯಾವ ಯಾವ ತಾಪತ್ರಯ ಎಂದು ಬಂದು ನಿಲ್ಲಿಸುವುದೋ, ಇಂದು ಅವಕಾಶ ದೊರೆತಿದೆ ಮನಸಿಟ್ಟು ಮಾಡುವ' ಎಂಬ ಅಪೇಕ್ಷೆಯನ್ನು ತೋಡಿಕೊಂಡರು.

ಒಂದೇ ದಿನದಲ್ಲಿ ಎರಡನೆಯ ಬಾರಿಗೆ ಬಡಿಸಲು ಬಂದ ಅನ್ನಪೂರ್ಣ ಅವರಿಗೆ ಊಟ ಮಾಡುವವರ ಅಪೇಕ್ಷೆಯನ್ನು ಅರಿತು ಬಡಿಸುವ ಇಷ್ಟ. ಬಡಿಸುವ ಕಲೆಯನ್ನು ಇತರರಿಗೂ ಹೇಳಿಕೊಡುತ್ತ ತಾವೂ ಬಡಿಸುತ್ತ ನಡೆಯುತ್ತಲೇ ಇರುವಂತಹ ಚಟುವಟಿಕೆ. ನಮ್ಮ ಪ್ರಶ್ನೆಗಳಿಗೆ ಉತ್ತರವನ್ನೂ ಬಡಿಸುತ್ತಲೇ ನೀಡಿದ್ದು ಒಂದು ವಿಶೇಷ. ಅವರ ತಂಡದವರೆಲ್ಲರೂ ಎರಡನೆಯ ಷಿಫ್ಟಿನಲ್ಲಿ ಕೆಲಸ ಮಾಡುವವರೇ. ಇತರ ಇಪ್ಪತ್ತೊಂದು ಮಂದಿ ಮಹಿಳೆಯರೂ ಅಲ್ಲಿಯೇ ಬಡಿಸುವ ಕೆಲಸ ಮಾಡುತ್ತಿದ್ದರು. ''ಇದೊಂದು ಪುಣ್ಯದ ಕೆಲಸ. ಎಲ್ಲರಿಗೂ ದೊರೆಯು ವಂತಹದಲ್ಲ. ದೊರೆಯುವಾಗ ಮಾಡುವುದೇ ಜಾಣತನ'' ಎಂಬುದು ಅವರ ಅಭಿಪ್ರಾಯ. ''ಆಕೆ ತತ್ವಶಾಸ್ತ್ರವನ್ನೂ ಅಭ್ಯಾಸ ಮಾಡಿದ್ದಾರೆ ಎಂದ ಮೇಲೆ ಅವರ ಮಾತಿನಲ್ಲಿ ಹುರುಳು ಇರಬೇಕು - ಅವರನ್ನು ಹಿಂಬಾಲಿಸುವುದೇ ಒಳ್ಳೆಯದು'' ಎಂದು ಅಭಿಪ್ರಾಯ ನೀಡಿದವರು ಚೆನ್ನೈನಿಂದ ಬಂದ ಇನ್ನೊಬ್ಬ ಹಿರಿಯಾಕೆ ಲಕ್ಷ್ಮೀ ನರಸಿಂಹನ್.



ಒಟ್ಟು ಹತ್ತು ದಿನಗಳ ಬ್ರಹ್ಮೋತ್ಸವದಲ್ಲಿ ದಿನಕ್ಕೆ 500 ಕ್ಕೂ ಮಿಕ್ಕ ಸ್ವಯಂಸೇವಕರು ಯಾತ್ರಿಕ ವಿಶ್ರಾಂತಿ ಸಮುದಾಯ ಭವನ, ಕಲ್ಯಾಣಕಟ್ಟೆ, ಅನ್ನದಾನಂ ಕಾಂಪ್ಲೆಕ್ಸ್, ಸರದಿಯ ಸಾಲುಗಳು, ಮೊದಲಾದ ಕಡೆ ಸೇರಿ ಕೆಲಸಗಳನ್ನು ಯಾತ್ರಿಕ ಸೇವಾ ಕಾರ್ಯಗಳನ್ನು ನಿರ್ವಹಿಸಿದರು. ಇಡೀ ಸೆಪ್ಟಂಬರ್ ತಿಂಗಳಿನಲ್ಲಿ ಒಟ್ಟು 7 ಸಾವಿರ ಮಂದಿ ಶ್ರೀವಾರಿಸೇವೆಯನ್ನು ಸಲ್ಲಿಸಿದರು ಎಂದರೆ ಅದರಲ್ಲಿನ ಹತ್ತು ದಿನಗಳಲ್ಲಿಯೇ 5 ಸಾವಿರ ಮಂದಿ ಸೇವೆ ಸಲ್ಲಿಸಿದ್ದಾರೆ. ಮಿಕ್ಕ ಎರಡು ಸಾವಿರ ಮಂದಿ 20 ದಿನಗಳಲ್ಲಿ ಹಂಚಿ ಹೋಗಿದ್ದಾರೆ ಎಂಬುದೂ ಇಲ್ಲಿಯೂ ಕಂಚಿಯ, ಚೆನ್ನೈಯ ಸ್ವಯಂ ಸೇವಕರ ಸರಬರಾಜು ನಿರಂತರವಾಗಿದ್ದಿತು ಎಂಬುದೂ ಮುಖ್ಯವಾಗುತ್ತದೆ.

ಬ್ರಹ್ಮೋತ್ಸವ ದಿನಗಳಲ್ಲಿ ಹೆಚ್ಚಿದ್ದ ಸ್ವಯಂಸೇವಕರ ಸಂಖ್ಯೆ ಇಡೀ ಸೆಪ್ಟಂಬರ್ ತಿಂಗಳಲ್ಲಿ ಸಾಮಾನ್ಯವಾಗಿ ಹೆಚ್ಚಾಗಿದ್ದಿತು ಎಂದು ವರದಿಯಾಗಿದೆ. ಒಟ್ಟು ಏಳು ಸಾವಿರದ ನನ್ನೂರ ಎಂಭತ್ತಾರು ಮಂದಿ ಶ್ರೀವಾರಿ ಸೇವೆಯಲ್ಲಿ ತಿಂಗಳುದ್ದಕ್ಕೆ ಭಾಗವಹಿಸಿದ್ದರು. ಇವರಲ್ಲಿ 3122 ಮಂದಿ ಮಹಿಳೆಯರಾದರೆ, 4364 ಮಂದಿ ಪುರುಷರಾಗಿದ್ದರು. ಅಕ್ಟೋಬರ್ ಬ್ರಹ್ಮೋತ್ಸವಗಳಲ್ಲಿ ಸ್ವಯಂಸೇವೆ ಮಾಡಲು ಸಾವಿರಕ್ಕೂ ಹೆಚ್ಚುಮಂದಿ ಸೆಪ್ಟಂಬರ್ ಕೊನೆಯೊಳಗೆ ನೊಂದಾಯಿಸಿಕೊಂಡಿದ್ದಾರೆ.

★★★★★

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ಆಂಗ್ಲಮೂಲ : ಡಾ|| ಎನ್. ರಮೇಶನ್, ಐ.ಎ.ಎಸ್.
ಕನ್ನಡಾನುವಾದ : ಬಿ. ಎನ್. ಶ್ರೀನಿವಾಸನ್. ಎಂ.ಎ.

## ಒಟ್ಟುನೋಟ - 1

(ಮುಂದುವರೆದಿದೆ.)

**ಆಲಯದ ಪ್ರಾಮುಖ್ಯ :**

ವನೋಪಾಂತ ನದೀಶೈಲ
ನಿರ್ಝರೋಪಾಂತ ಭೂಮಿಷು ।
ರಮಂತೇ ದೇವತಾಃ ನಿತ್ಯಂ
ಪುರೇಷೂದ್ಯಾನ ವತ್ಸುಚ ॥

ನದಿ, ಪರ್ವತ, ನೀರಿನ ಬುಗ್ಗೆ, ತರುಗುಲ್ಮಗಳಿರುವಲ್ಲಿ ಪಟ್ಟಣಗಳ ಉದ್ಯಾನವನಗಳಲ್ಲಿ ದೇವತೆಗಳು ನಿತ್ಯವೂ ವಿಹರಿಸುತ್ತಾರೆ.

ಭವಿಷ್ಯೋತ್ತರ ಪುರಾಣ - 1-130-15.

ಆರ್ಯಾವರ್ತವು ಪವಿತ್ರ ದೇವಾಲಯಗಳ, ಗುಡಿ ಗೋಪುರಗಳ, ಪುಣ್ಯಪ್ರದವಾದ ನದಿ ಪರ್ವತಗಳ ಸ್ಥಳವಾಗಿದೆ. ಈ ಪವಿತ್ರ ಭೂಮಿಯಲ್ಲಿರುವ ಜನ ಸಹಜವಾಗಿಯೇ ಧಾರ್ಮಿಕರಾಗಿದ್ದಾರೆ. ಅವರು ತಮ್ಮ ಧಾರ್ಮಿಕ ಭಾವನೆಗಳನ್ನು ವಿವಿಧ ರೀತಿಯಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ. ಹೈಂದವ ಧರ್ಮ ಅಥವಾ ಸನಾತನ ಧರ್ಮ ಇಲ್ಲಿನ ಜನತೆಯ ಪರಂಪರಾಗತ ಶಾಸನ, ಮೌಲ್ಯವೂ ಆಗಿದೆ. ಈ ಜೀವನ ಧರ್ಮವನ್ನು ಪ್ರಾಚೀನ ಶ್ರುತಿ ಸ್ಮೃತಿಗಳು ಅನೃತದ ವಿರುದ್ಧವಾದ ಋತ ಎಂದು ಹೆಸರಿಸಿದವು.

ವೇದಗಳಲ್ಲಿ ಹಿಂದೂಗಳು ವಿಶ್ವಾಸವನ್ನು ಹೊಂದಿದ್ದಾರೆ. ಇವೇ ಅವರ ಪವಿತ್ರ ಧರ್ಮಗ್ರಂಥಗಳು. ಬದುಕಿನ ಹಲವಾರು ಮುಖಗಳನ್ನು ಅದರ ಎಲ್ಲ ವಿವರಗಳೊಡನೆ ವೇದಗಳು ಪ್ರಸ್ತುತಪಡಿಸುತ್ತವೆ. ವೈದಿಕ ಋಷಿಗಳು ಕಂಡುಕೊಂಡ ತಾತ್ವಿಕ ಪರಮಾರ್ಥಗಳನ್ನು ಮಾತ್ರವೇ ಅಲ್ಲದೆ ವೇದಗಳು ಸಾಮಾನ್ಯ ಮಾನವನ ಜೀವನ ವಿಧಾನದ ನಡಾವಳಿಯನ್ನೂ ವಿವರಿಸುತ್ತವೆ.

ವೇದಗಳನ್ನು ನಾಲ್ಕು ಭಾಗಗಳಲ್ಲಿ ಅಧ್ಯಯನ ಮಾಡುವರು. ಸಂಹಿತೆಗಳು, ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು. ಸಂಹಿತೆಗಳು ಅತ್ಯುತ್ಕೃಷ್ಟ ಕಾವ್ಯ ರೂಪದಲ್ಲಿ ಕಂಡುಬರುವ ಇಂದ್ರ, ವರುಣ, ಅಗ್ನಿ - ಮೊದಲಾದ ದೇವತೆಗಳ ಸ್ತುತಿಗಳಾದರೆ, ಬ್ರಾಹ್ಮಣಗಳು ವೇದಗಳಲ್ಲಿನ ಆಚಾರಗಳನ್ನು ವಿವರಿಸಿ ಪ್ರತಿಯೊಬ್ಬನೂ ನಡೆಸಬೇಕಾದ ವಿವಿಧ



ಯಜ್ಞಗಳ ವಿವರಣೆಯಾಗಿವೆ. ಆರಣ್ಯಕಗಳು, ಜೀವನದ ಬಹುಪಾಲು ಅನುಭವಗಳನ್ನು ಹೊಂದಿದ ಕಾಡು ಸೇರಿ ಮಥಿಸಿದ ಪ್ರಜ್ಞಾವಂತ ಮಸ್ತಕಗಳಲ್ಲಿ ಮುಕ್ತಿಯ ಬಗ್ಗೆ ಉಂಟಾದ ವಿಚಾರಗಳನ್ನು ತಿಳಿಸುತ್ತವೆ. ವೇದಾಂತ ವೆಂದು ಕರೆಯಲಾದ ಉಪನಿಷತ್ತುಗಳು, ಪ್ರಾಚೀನ ಋಷಿ ಮುನಿಗಳು ತಾವು ಪಡೆದ ದರ್ಶನಸಾರವನ್ನು ಸಂಗ್ರಹ ರೂಪದಲ್ಲಿ ವಿವರಿಸುತ್ತವೆ. ಈ ನಾಲ್ಕೂ ಭಾಗಗಳಲ್ಲಿ ಕಂಡುಬರುವ ಎಲ್ಲ ವಿಚಾರಗಳನ್ನೂ ಒಟ್ಟಿಗೆ ಸೇರಿಸಿ ಸ್ಥೂಲವಾಗಿ ಇಂದಿಗೂ ಅದರಂತೆಯೇ ಹಿಂದೂಗಳು ನಡೆದುಕೊಂಡು ಬರುತ್ತಿದ್ದಾರೆ.

ಪ್ರಾಚೀನ ಆದರ್ಶಗಳ ಪ್ರಕಾರ ಮನುಷ್ಯ ಜೀವನವೆಂಬುದು ಅವನ ಹಿಂದಿನ ಎಲ್ಲ ಜನ್ಮಗಳಲ್ಲಿ ಮಾಡಿದ ಒಟ್ಟು ಕರ್ಮದ ಮೊತ್ತ ಫಲ. ಪ್ರತಿ ಕರ್ಮವೂ ತನ್ನದೇ ಆದ ವಾಸನಾ ಫಲವಾದ ಮತ್ತೊಂದು ಕರ್ಮಕ್ಕೆ ಮಾರ್ಗವಾಗುತ್ತದೆ. ಈ ಒಂದು ವಿಷವರ್ತುಲದಿಂದ ಹೊರಬೀಳಬೇಕಾದರೆ ಪ್ರತಿಯೊಬ್ಬನೂ ತನ್ನ ಕರ್ತವ್ಯವಾದ ಕರ್ಮವನ್ನು ನಿಸ್ಸಂಗತ್ವದಿಂದ ಆಚರಿಸಬೇಕು. ಆಗಲೇ ಕರ್ಮಫಲ ತಾಕದು. ಧರ್ಮವೆಂಬುದು ಪ್ರತಿಯೊಬ್ಬನ ಕರ್ತವ್ಯ. ಯಾವುದೇ ಪರಿಸ್ಥಿತಿಯಲ್ಲಿಯೂ ವ್ಯಕ್ತಿ ತನ್ನ ಧರ್ಮವನ್ನು ನಿರ್ವಹಿಸಲೇಬೇಕು. ಧರ್ಮ ಎಂದರೇನೆಂಬುದನ್ನು ವಿವಿಧ ಶಾಸ್ತ್ರಗಳು ವರ್ಣಿಸಿವೆಯಾಗಿ, ವ್ಯಕ್ತಿಯು ಕರ್ತವ್ಯ ಭಾವದಿಂದ ಭಗವದರ್ಪಣವೆಂಬ ಆದರ್ಶದಲ್ಲಿ ಅದನ್ನು ನಿರ್ವಹಿಸಬೇಕಷ್ಟೆ. ಹೀಗಾಗಿ ಕರ್ಮ ಸಿದ್ಧಾಂತವೂ, ಧರ್ಮ ಸಿದ್ಧಾಂತವೂ ಬೆರೆತು ನಮಗೆ ಒಂದು ತಾತ್ವಿಕವಾದ ಹಾಗೂ ಪ್ರಾಯೋಗಿಕವಾದ ಜೀವನ ಮಾರ್ಗವನ್ನು ತೆರೆದುಕೊಟ್ಟು ಮನಸ್ಸಿಗೆ ಶಾಂತಿಯನ್ನು ಒದಗಿಸಿ, ಜೀವನ್ಮುಕ್ತತೆಯನ್ನು ಪಡೆಯಲು ತಕ್ಕ ಸಮಾಧಾನವನ್ನು ಒದಗಿಸುತ್ತದೆ. ಮನುಷ್ಯನ ಇಂದು ಅವನ ಪೂರ್ವಾರ್ಜಿತ ಕರ್ಮ ಫಲಗಳಿಂದಾಗಿ ತಿದ್ದಲ್ಪಟ್ಟಿರುವುದರಿಂದಾಗಿ, ಅವನಿಗೆ ಇಷ್ಟವಿದ್ದರೂ ಇಲ್ಲದಿದ್ದರೂ ಧರ್ಮವು ಅವನ ಮೇಲೆ ಕರ್ತವ್ಯದ ಒತ್ತಡವನ್ನು ಹೇರುವುದಾಗಿ, ಆತ ಹಾಗೆಯೇ

ಧರ್ಮಮಾರ್ಗದಲ್ಲಿ ನಡೆಯುವುದರಿಂದ ಮಾತ್ರವೇ, ಕರ್ಮ ಫಲಾಸಕ್ತಿಯಿಲ್ಲದ ಕರ್ತವ್ಯಾಚರಣೆ ಯಿಂದ ಮಾತ್ರವೇ - ಮುಕ್ತಿ ಮಾರ್ಗವನ್ನು ಕಾಣಬಲ್ಲ.

ಹೀಗಾಗಿ ಹಿಂದೂ ಧರ್ಮವೆಂಬುದು ಒಂದು ದೊಡ್ಡ ವಟವೃಕ್ಷವಾಗಿ ಎಲ್ಲ ರೀತಿಯ ಉಪವಿಭಾಗಗಳ ಲತೆಗಳನ್ನೂ ತನ್ನ ವಿಶಾಲ ಹಂದರದಲ್ಲಿ ಪಡೆದು ನಡೆಯುವಂತಾಗಿದೆ. ವಿವಿಧ ದೇವತೆಗಳ ಉಪಾಸನೆಯಿದ್ದರೂ ಸಾಮಾನ್ಯ ತಳಹದಿಯಾಗಿ ವೇದಗಳನ್ನು ಹೊಂದಿರುವಂತಹದು ಎನ್ನಬೇಕು.

ಈ ಒಂದು ಹಾದಿಯಲ್ಲಿಯೇ ನಡೆಯುವ ಹಿಂದೂ ದೇವಾಲಯಗಳೂ ಸಹ, ಶತಮಾನಗಳ ಕಾಲಾವಧಿಯಲ್ಲಿ ಹಲವಾರು ಪರಿವರ್ತನಶೀಲ ಪರಿಕಲ್ಪನೆಗಳಿಗೆ ಪಕ್ಕಾಗಿದ್ದರೂ ವೇದಗಳ ಮೂಲ ಭೂತವಾದ ತಾತ್ವಿಕತೆಯನ್ನೇ ಅಭಿವ್ಯಕ್ತಿಗೊಳಿ ಸುತ್ತವೆ ಎಂಬುದರಲ್ಲಿ ಅತಿಶಯವಿಲ್ಲ. ಆಲಯವೆಂದರೆ ಇಡೀ ವಿಶ್ವದ ಪ್ರಭುವಾದ ದೇವರು ನೆಲೆ ನಿಂತ ಸ್ಥಳವೆಂದು ಹೇಳಲಾಗುತ್ತದೆ. ಭಕ್ತನ ಕರ್ತವ್ಯವೆಂದರೆ ಭಗವಂತನನ್ನು ಯಜಮಾನ, ಒಡೆಯನೆಂದು ಗುರುತಿಸಿ ಸರ್ವಥಾ ಅವನ ಸೇವೆ ಮಾಡುವುದು. ಗೀತ ನೃತ್ಯಗಳಿಂದ ಅವನನ್ನೆಚ್ಚರಿಸುವುದು, ಆರಾಧನೆ ಅರ್ಚನೆ ಮಾಡುವುದು, ಅವನಿಗೆ ನಿವೇದನೆಯನ್ನು ಅರ್ಪಿಸುವುದು. ಆತನ ಕರುಣೆಯೆಂಬಂತೆ ಪ್ರಸಾದವನ್ನು ಸ್ವೀಕರಿ ಸುವುದು.

ಹಿಂದೂ ಭಾರತದಲ್ಲಿ ಜೀವನ ಹಾಗೂ ಧರ್ಮಗಳೆರಡೂ ಒಂದರೊಳಗೊಂದು ಸೇರಿಹೋಗಿ ಇವೆರಡನ್ನೂ ಪ್ರತ್ಯೇಕ ಮಾಡುವುದು ಅಸಾಧ್ಯ. ವೇದಗಳ ನಂತರ ಬರುವ ಪ್ರಮುಖ ಪುಸ್ತಕಗಳೆಂದರೆ ಪುರಾಣಗಳು. ಇವುಗಳು ಪ್ರಾಚೀನ ಭಾರತದ ಇತಿಹಾಸದೊಡನೆ ಗುರುತು ತಿಳಿಯದಂತೆ ಸೇರಿದ ಧಾರ್ಮಿಕ ವಿವರಗಳಿಂದಾಗಿ ಹಿಂದೂಗಳಿಗೆ ಪ್ರಧಾನ ಗ್ರಂಥಗಳಾಗಿವೆ. ನೈಮಿಷಾರಣ್ಯದಲ್ಲಿ (ಆಧುನಿಕ ನಿಮ್ಸಾರ್ ಅಥವಾ ಅವಧ) ನೆರೆದ ಮುನಿಗಳಿಗೆ ಸಂತ ಸೂತನು ಈ ಪುರಾಣಗಳನ್ನೂ ಹೇಳಿದಂತೆ ಸೂಚಿಸಲಾಗಿದೆ. ಪ್ರಾಚೀನ ಕಾಲದಲ್ಲಿ ತಿಳಿದವರು ಈ ಪುರಾಣಗಳನ್ನು ವಾಚಿಸಿ ಜನರಿಗೆ ವಿವರಿಸುತ್ತಿದ್ದರು. ಇವುಗಳ ಪ್ರಕಾರ ಎಲ್ಲ ಹಿಂದೂಗಳೂ ಸಹ ಒಂಬತ್ತು ರೀತಿಯ ಧರ್ಮಗಳನ್ನು ಆಚರಿಸಬೇಕಾಗಿದ್ದಿತು.

1. ಸತ್ಸಂಗ - ಒಳ್ಳೆಯವರೊಡನೆ ಸೇರಿ ಇರುವಿಕೆ.

2. ಹರಿಕಥೆ - ಪವಿತ್ರ ಸಂಕೀರ್ತನ ಕಥಾ ಕಾಲಕ್ಷೇಪ.

3. ಈಶ್ವರ ಭಕ್ತಿ - ದೇವರಲ್ಲಿ ಪ್ರೀತಿಯಿರುವಿಕೆ.

4. ತೀರ್ಥಯಾತ್ರೆ - ಪವಿತ್ರ ಕ್ಷೇತ್ರಗಳಿಗೆ ಹೋಗುವಿಕೆ.

5. ಗುರುಪೂಜೆ - ತಿಳಿಸಿಕೊಡುವವರನ್ನು ಪೂಜಿಸುವಿಕೆ.

6. ಧ್ಯಾನ - ಮನದಲ್ಲಿ ದೇವರ ಚಿಂತನೆ.

7. ಭಾಗವತಸೇವೆ - ದೇವರ ಭಕ್ತರಿಗೆ ಸಲ್ಲಿಸುವ ಸೇವೆ.

8. ಜಪ - ದೇವರ ನಾಮದ ಹೇಳಿಕೊಳ್ಳುವಿಕೆ.

9. ಲೋಕಕಲ್ಯಾಣ - ಜಗತ್ತಿನ ಒಳಿತಿಗಾಗಿ ಅಪೇಕ್ಷಿಸುವಿಕೆ, ಕೆಲಸ ಮಾಡುವಿಕೆ.

ಪ್ರಾಚೀನ ಕಾಲದಿಂದಲೂ ಪ್ರತಿಹಿಂದುವೂ ಭಗವಂತನ ಆರಾಧನೆ ಅರ್ಚನೆ, ಕೀರ್ತನೆಗಳಿಗಾಗಿ ಹೊಂದಿದ್ದ ಒಂದು ಸಾಮಾನ್ಯಸ್ಥಾನವೆಂದರೆ ಆಲಯಗಳು. ತಮಿಳಿನ ಹಿರಿಯ ಶರಣೆ ಅವ್ವೈಯಾರ್ ಹೇಳುವಂತೆ ಆಲಯವಿಲ್ಲದ ನಗರದಲ್ಲಿ ಯಾರೂ ಇರಲೇ ಬಾರದು. ಹಿಂದೂಗಳಿಗೆ ಭಗವಂತ ಕೃಪೆ ಹರಿದುಬರುವ ಮೂಲಸ್ರೋತ ಸ್ಥಾನಗಳೆಂದರೆ ಆಲಯಗಳೇಯೆ.

ಆಗಮಗಳಲ್ಲಿ ಶಾಸ್ತ್ರಗಳಲ್ಲಿ ಆಲಯ ನಿರ್ಮಾಣದ ಬಗ್ಗೆ, ಆಲಯದ ಸ್ಥಳದ ಆಯ್ಕೆಯ ಬಗ್ಗೆ, ಅದರೊಳಗೆ ಇರುವಂತಹ ವಿಗ್ರಹದ ಬಗ್ಗೆ ಪ್ರತಿಷ್ಠಾಪನೆಯ ಬಗ್ಗೆ ವಿವರವಾದ ನೀತಿ ನಿಯಮಗಳನ್ನು ರೂಪಿಸಲಾಗಿದೆ. ಪೂಜೆ ನಡೆಸುವ ವಿಧಾನಗಳ ಬಗ್ಗೆಯೂ, ಕಾಲದ ಬಗ್ಗೆಯೂ, ಪೂಜೆ ಮಾಡುವವರ ಅರ್ಹತೆಯ ಬಗ್ಗೆಯೂ ಇಂತಹವೇ ನಿಯಮಗಳನ್ನು ವಿಧಿಸಲಾಗಿವೆ. ಆಲಯದಲ್ಲಿ ದೇವರ ಪೂಜೆಯಿಂದ ಚಿತ್ತ ಸಮತೆಯುಂಟಾಗಿ, ಅರಿಷಡ್ವರ್ಗ ನಿಯಂತ್ರಣವಾಗಿ, ಭಕ್ತರು ಭಗವಂತನನ್ನು ಸದಾ ನೆನಪಿನಲ್ಲಿಡಲು ನೆರವಾಗುತ್ತದೆ.

ಆಲಯವನ್ನು ಹೇಗೆ ನಿರ್ಮಾಣ ಮಾಡುತ್ತಾರೆ ಎಂದರೆ ಭಕ್ತರು ಆಲಯವನ್ನು ಪ್ರವೇಶಿಸಿದ ಒಡನೆಯೇ ಒಂದು ರೀತಿಯ ಪವಿತ್ರವಾತಾವರಣದ ಅನುಭವ ಹೊಂದುವರು. ಗರ್ಭಗೃಹವು ಸಾಮಾನ್ಯವಾಗಿ ಅತಿ ಬೆಳಕಿನಲ್ಲಿದ್ದು, ಪ್ರಧಾನ ವಿಗ್ರಹದ ಹೊರತು ಮಿಕ್ಕಂತೆ ಯಾವ ಗೋಡೆ ಅಲಂಕಾರಗಳೂ ಇರುವುದಿಲ್ಲ. ಇದರಿಂದಾಗಿ ಭಕ್ತರ ಏಕಾಗ್ರತೆ ಹೆಚ್ಚಲು ಸಹಾಯಕವಾಗುವುದು. ಒಂದು ಪರಂಪರೆಯ ಹೇಳಿಕೆಯಂತೆ ಆಲಯವು ವಿಶ್ವದ ಪ್ರತೀಕವಾಗಿದ್ದು ಒಳಗಿನ ವಿಗ್ರಹವು ಪರಮಾತ್ಮದ್ಯೋತಕವಾಗಿರುವುದು. ದೇವರ ಮುಂದೆ ಒಂದು ಪರದೆಯಿರುತ್ತದೆ. ಇದು ಮೂರು ಗುಣಗಳ - ಸತ್ವ ರಜಸ್ಸು ತಮಸ್ಸುಗಳ - ಬಿಳಿ ಕೆಂಪು ಕಪ್ಪು ಬಣ್ಣಗಳಿಂದ ಕೂಡಿರುವುದು. ತ್ರಿಗುಣಾತ್ಮಕವಾದ ಈ ತೆರೆಯು ಸರಿದಲ್ಲಿ ಪರಮಾತ್ಮನ ಚಿತ್‌ಜ್ಯೋತಿ ಕಂಡು ಬರುತ್ತದೆ. ಇನ್ನೊಂದು ಪರಂಪರೆಯಂತೆ ಆಲಯವು ಮನುಷ್ಯ ದೇಹವಿದ್ದಂತೆ. ನಡೆದಾಡುವ ದೇವಾಲಯವೇ ಈ ದೇಹ. ಇಲ್ಲಿ ಜೀವವು ಕೇಂದ್ರದಲ್ಲಿದ್ದು, ಗರ್ಭಗೃಹವು ಕಂಠವಾಗಿ ಶಿರವೇ ಗೋಪುರ ಅಥವಾ ಕಳಸವಾಗಿರುವುದು. ಹೊಟ್ಟೆಯು ಮುಖಮಂಟಪವಾದರೆ ಕಾಲೇ ಕಂಭಗಳು. ಜೀವವೇ ದೇವರು. ಹೀಗಾಗಿ ದೇಹದ ಎಲ್ಲ ಭಾಗಗಳೂ ದೇವರ ಅಂಗಾಂಗಳೆಂದು ಪರಿಕಲ್ಪಿತವಾಗಿ ಇದನ್ನು ಪವಿತ್ರ ದೃಷ್ಟಿಯಿಂದ ಭಾವಿಸಬೇಕು. ಮೇಲಿನ ಅಂಶವನ್ನು ಈ ಶ್ಲೋಕವು ಸುಂದರವಾಗಿ ತಿಳಿಸಿಹಿವುದು -

ಶಿಖರಂ ಶಿರ ಇತ್ಯಾಹುಃ
ಗರ್ಭಗೃಹೇ ಗಳಸ್ಥಾ

ಮಂಟಪಂ ಕುಕ್ಷಿರಿತ್ಯಾಹುಃ
ಪ್ರಾಕಾರಂ ಜಾನು ಜಂಘಿಕಂ
ಗೋಪುರಂ ಪಾದ ಮಿತ್ಯಾಹುಃ
ಧ್ವಜೋ ಜೀವನ ಮುಚ್ಯತೇ

ಮತ್ತೊಂದು ಶ್ಲೋಕದಲ್ಲಿ ದೇವಾಲಯವನ್ನು ಒಂದು ಪುಷ್ಪ ಇರುವಂತಹ ಕಮಲಕಾಸಾರ ವೆಂದು ತಿಳಿಯಲಾಗಿದೆ.

ಜಲ ವಿಮಾನಂ ಧ್ರುವ ಬೇರ ಕಂದಂ
ಕೂರ್ಚ ತು ನಾಲಂ ಕುಸುಮಂ ಚ ಕೌತುಕಂ
ಬಲ್ಯುತ್ಸವಂ ಚ ಸ್ನಪನಂ ಚ ಪತ್ರಕಂ
ದೇವಾಲಯೋಽಯಂ
ಕಮಲಾಲಯಃ ಸ್ಯಾತ್

ಸರೋವರದಲ್ಲಿನ ನೀರು ಎಂದರೆ ವಿಮಾನ. ಧ್ರುವಮೂರ್ತಿಯು ಕಮಲದ ಬೇರು - ಕಮಲದ ನಾಳವೇ ಸಂಬಂಧ ಕೂರ್ಚ. ಕೌತುಕ ಮೂರ್ತಿಯು ಕಮಲ. ಹೀಗೆ ದೇವಾಲಯವು ಕಮಲಾಲಯವೆಂಬಂತೆ ಭಾಸವಾಗುತ್ತದೆ.

ಸಾಮಾನ್ಯವಾಗಿ ಎಲ್ಲ ದೇವಾಲಯ ಗಳಲ್ಲಿಯೂ ಎರಡು ಮೂರ್ತಿಗಳಿರುತ್ತವೆ. ಶಾಶ್ವತವಾಗಿ ಒಂದೇ ಸ್ಥಳದಲ್ಲಿ ಅಚಲವಾಗಿರುವುದನ್ನು ಮೂಲಬೇರವೆಂದೂ, ಹೊರಗಡೆ ಉತ್ಸವಾದಿಗಳಲ್ಲಿ ತೆಗೆದುಕೊಂಡು ಬರುವಂತಹ ಮೂಲಮೂರ್ತಿಯನ್ನು ಪ್ರತಿನಿಧಿಸುವಂತಹ ಚರಮೂರ್ತಿಗೆ ಉತ್ಸವಮೂರ್ತಿಯೆಂದೂ ಕರೆಯುವರು. ಹಲವು ಆಲಯಗಳಲ್ಲಿ ಅಭಿಷೇಕ, ಉತ್ಸವಗಳಿಗೆ ಬೇರೆ ಬೇರೆ ವಿಗ್ರಹಗಳಿರುವುದುಂಟು. ಶೈವ ಆಗಮಗಳು ಮೂಲ ಬೇರವನ್ನು ಸೂಕ್ಷ್ಮಲಿಂಗವೆಂದೂ, ಉತ್ಸವಬೇರವನ್ನು ಬಲಿಬೇರವೆಂದೂ, ಬಲಿ ಲಿಂಗವೆಂದೂ ಹೆಸರಿಸುತ್ತವೆ. ವೈಷ್ಣವ ಆಲಯಗಳಲ್ಲಿ ಆರಾಧನೆ ಪೂಜೆಗಳನ್ನು ನಿರ್ವಹಿಸುವ ವಿಧಾನವನ್ನು ರೂಪಿಸುವ ವೈಖಾನಸ ಆಗಮ ಕೃತಿಗಳು ಪರಮಾತ್ಮನನ್ನು ಐದು ವ್ಯೂಹ ವಿಭಾಗಗಳಲ್ಲಿ ವಿಂಗಡಿಸುತ್ತವೆ. ಇವುಗಳನ್ನು ವಿಷ್ಣು, ಪುರುಷ, ಸತ್ಯ, ಅಚ್ಯುತ, ಹಾಗೂ ಅನಿರುದ್ಧ ಎಂದು ತಿಳಿಯಲಾಗಿದೆ. ಈ ಐದು ವಿಭಾಗಗಳನ್ನು ಐದು ವಿಧವಾದ ವಿಗ್ರಹಗಳಿಂದ ಗುರುತಿಸಲಾಗುತ್ತದೆ. ಅವುಗಳೆಂದರೆ - ಮೂಲಬೇರ, ಕೌತುಕಬೇರ, ಉತ್ಸವಬೇರ, ಸ್ನಪನಬೇರ ಹಾಗೂ ಬಲಿಬೇರಗಳು. ಇವುಗಳಲ್ಲಿನ ಪ್ರತಿಯೊಂದಕ್ಕೂ ಬೇರೆ ಬೇರೆಯೇ ಆದ ಪೂಜಾವಿಧಿಗಳಿವೆ. ಮೂಲಬೇರವನ್ನು ಲೋಕ ಕಲ್ಯಾಣಕ್ಕಾಗಿ ಅರ್ಚಿಸಲಾಗುವುದು. ಕೌತುಕ ಬೇರವನ್ನು ವ್ಯಕ್ತಿಯ ಏಳಿಗೆಗೆಂದು ಪೂಜೆ ಮಾಡುವರು. ಉತ್ಸವ ಬೇರವನ್ನು ಮೆರವಣಿಗೆಯಲ್ಲಿ ಬಳಸುವರು. ಸ್ನಪನಬೇರವನ್ನು ಅಭಿಷೇಕದಲ್ಲಿಯೂ, ಬಲಿಬೇರವನ್ನು ನೈವೇದ್ಯ ಸಮರ್ಪಣೆಯಲ್ಲಿಯೂ ಬಳಸಲಾಗುತ್ತದೆ.

ಧ್ರುವಂ ಚ ಲೋಕ ರಕ್ಷಾರ್ಥಂ
ಅರ್ಚನಾರ್ಥಂ ಚ ಕೌತುಕಂ
ಔತ್ಸವಂ ಉತ್ಸವಾರ್ಥಂ ಚ
ಬಲ್ಯರ್ಥಂ ಬಲಿಬೇರಕಂ
ಸ್ನಪನಂ ಸ್ನಪನಾರ್ಥಂ ಚ
ಪಂಚಬೇರಾಃ ಪ್ರಕೀರ್ತಿತಾಃ

- ಹೀಗಾಗಿ ಹಿಂದೂ ಧರ್ಮವು ತನ್ನ ಭಕ್ತರಿಗೆ ದೇವರು ಸುಗುಣ ಹಾಗೂ ನಿರ್ಗುಣನಾಗಿರು ಎರಡು ರೀತಿಯಲ್ಲಿಯೂ ಇರುವನೆಂಬುದನ್ನು ತಿಳಿಸಿಕೊಡುತ್ತದೆ. ಹೈಂದವ ಆಲಯವು ಆಲಯದ ಈ ಪ್ರಾತಿನಿಧಿಕತೆಯನ್ನು ಮನದಲ್ಲಿಟ್ಟುಕೊಂಡೇ ಮುಂದೆ ಸಾಗಲು ಸಹಕಾರಿಯಾಗುತ್ತದೆ.

ಎಲ್ಲ ದೇವಾಲಯಗಳೂ ಸ್ಥಳ ಪುರಾಣಗಳನ್ನು ಹೊಂದಿದ್ದು ಧಾರ್ಮಿಕ ಗ್ರಂಥಗಳ ಹೇಳಿಕೆಗಳಿಗೆ ವ್ಯಾಖ್ಯಾನಗಳೋಪಾದಿಯಲ್ಲಿ ಕೆಲಸಮಾಡುತ್ತವೆ. ಸ್ಥಳೀಯ ಚರಿತ್ರೆಯನ್ನೂ, ಆಲಯದ ನಿರ್ಮಾಣವಿವರವನ್ನೂ ಅವು ತಿಳಿಯುತ್ತವೆ. ಜೊತೆಗೇ ಅವುಗಳಿಗೆ ಸಂಬಂಧಿಸಿದ ಪೌರಾಣಿಕ ಹಿನ್ನೆಲೆಯನ್ನೂ ಒದಗಿಸುತ್ತವೆ. ಆಯಾ ಕ್ಷೇತ್ರವು ಪಾವನವಾಗಲು ಕಾರಣವಾದ ಮೂಲಭೂತ ಐತಿಹ್ಯಗಳನ್ನು ತಿಳಿಸುತ್ತವೆ. ಅಲ್ಲಿನ ಆಲಯಗಳ ಬುನಾದಿ ಪ್ರತಿಷ್ಠೆಗಳು ಯಾವಾಗ ನಡೆಯಿತೆಂಬುದನ್ನು ತಿಳಿಸುತ್ತವೆ. ಆಯಾ ದೇವರ ಪೂಜೆ ಮಾಡಿ ಆಗಿ ಹೋದ ರಾಜ ರಾಣಿಯರ ಕಥೆಗಳನ್ನೂ, ಆಲಯವು ಪಡೆದ ಜೀರ್ಣೋದ್ಧಾರ ಮರಮ್ಮತ್ತುಗಳನ್ನೂ ತಿಳಿಸುತ್ತವೆ. ಹೀಗೆ ಸ್ಥಳ ಪುರಾಣಗಳು ಆಲಯಗಳ ಪ್ರಾಚೀನ ಚರಿತ್ರೆಯನ್ನು ತಿಳಿಸುತ್ತವೆ. ಇವುಗಳ ಜೊತೆಗೇ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ರಾಜ ರಾಣಿ ಮನ್ನೆಯ ಪಾಳಯಗಾರರು ಆಲಯಗಳಿಗೆ ದಾನ ಧರ್ಮಗಳನ್ನು ನೀಡಿ ಶಾಸನಗಳನ್ನು ಹಾಕಿಸಿದ್ದಾರೆ. ಇವುಗಳಿಂದಲೂ ಬಹು ಮೂಲ್ಯವಾದ ಐತಿಹಾಸಿಕ ವಿವರಗಳು ದೊರೆಯುವುವು.



ಹೈಂದವ ದೇವಾಲಯಗಳಲ್ಲಿ ಸಾಧಾರಣವಾಗಿ ಆಲಯದ ಮಧ್ಯಭಾಗದಲ್ಲಿ ಮುಖ್ಯವಾದ ಗರ್ಭಗುಡಿಯಿರುತ್ತದೆ. ಒಂದು ಆಯತಾಕಾರದ ಅಂಗಳದಲ್ಲಿ ಇನ್ನಿತರ ಉಪಕಟ್ಟಡಗಳಿರುವುದುಂಟು. ಈ ಅಂಗಳದ ಪೂರ್ವದಿಕ್ಕಿನಲ್ಲಿ ಸಾಮಾನ್ಯವಾಗಿ ಒಂದು ದೊಡ್ಡ ಗೋಪುರವಿದ್ದು ಮೈಲಿಗಳ ದೂರದಿಂದಲೂ ಕಾಣುವಂತಿರುತ್ತದೆ. ಗರ್ಭಗುಡಿಯ ಮೇಲಿರುವ ಗೋಪುರವನ್ನು ವಿಮಾನವೆಂದು ಕರೆಯುವರು. ಇದು ಸಾಧಾರಣವಾಗಿ ಮೇಲಿನವರೆಗೆ ಅಲಂಕಾರಮಯ ಶಿಲ್ಪಗಳಿಂದ ಕೂಡಿರುತ್ತದೆ. ಕೇಂದ್ರದ ಗರ್ಭಗುಡಿಯು ಒಂದು ವೃತ್ತಾಕಾರದ ಅಥವಾ ಚೌಕಾಕಾರದ ಕೊಠಡಿಯಾಗಿದ್ದು ಇದರ ಸುತ್ತ ಭಕ್ತರು ಸುತ್ತಿಬರಲು ಒಂದು ಪ್ರದಕ್ಷಿಣಾ ಪಥವಿರುತ್ತದೆ. ಇದರ ಮುಂದೆ ಅರ್ಧಮಂಟಪ ವೆನ್ನಬಹುದಾದಂತಹ ಓಣಿ ಇರುವುದು. ಇದು ಚೌಕಾಕಾರ ಅಥವಾ ಆಯತಾಕಾರವಾಗಿರುವುದು. ಇದರ ಮುಂದೆ ಮಹಾಮಂಟಪ ಅಥವಾ ಕಂಬಗಳ ದೊಡ್ಡ ಮಂಟಪವಿದ್ದು ಇದಕ್ಕೆ ಒಂದು ದೊಡ್ಡ ದ್ವಾರವಿರುತ್ತದೆ. ಮಿಕ್ಕ ಮೂರು ಕಡೆಗಳಲ್ಲಿ ಸ್ಥಳಾವಕಾಶವಿರುವುದು. ಕಲ್ಯಾಣ ಮಂಟಪ, ನಾಟ್ಯಮಂಟಪ, ಮೊದಲಾದವುಗಳಿರುತ್ತವೆ. ಅರ್ಧಮಂಟಪದಿಂದೀಚೆಗೆ ಮುಖ್ಯದ್ವಾರದ ಎರಡೂಕಡೆ ದ್ವಾರಪಾಲಕ ವಿಗ್ರಹಗಳಿರುತ್ತವೆ. ಗುಡಿಯ ಮುಂದೆ ಅಂಗಳದಲ್ಲಿ ಮಧ್ಯದಲ್ಲಿ ಶಿವದೇವಾಲಯದಲ್ಲಿಯಾದರೆ ಕುಳಿತಿರುವ ನಂದಿಯನ್ನು, ವಿಷ್ಣುದೇವಾಲಯವಾದರೆ ಗರುಡಮಂಟಪವನ್ನು ಕಾಣುತ್ತೇವೆ. ಅದರಿಂದಾಚೆಗೆ ಎಂದರೆ ಹೊರಗಿನಿಂದ ಬಂದಾಗ ಮೊದಲಿಗೆ ಬಲಿಪೀಠ ಧ್ವಜಸ್ತಂಭಗಳು ಕಂಡುಬರುವುವು. ಹೀಗಾಗಿ ಆಲಯದ ಮುಖ್ಯ ಲಕ್ಷಣಗಳು ಹೀಗೆಂದು ಪಟ್ಟಿ ಮಾಡಬಹುದು.

1. ಪಾವನ ಮೂರ್ತಿಯಾದ ದೇವರ ವಿಗ್ರಹವನ್ನು ಹೊಂದಿದ ಗರ್ಭಗೃಹ. ಇದರ ಮೇಲೆ ಗೋಪುರದಂತಹ ವಿಮಾನ.

2. ಗರ್ಭಗೃಹದ ಎದುರಿಗಿರುವ ಅರ್ಧಮಂಟಪ, ಅನಂತರ ಮಹಾಮಂಟಪ.

3. ಗರ್ಭಗೃಹಕ್ಕೆ ಹೊಂದಿಕೊಂಡ ಒಳ ಪ್ರದಕ್ಷಿಣಾ ಪಥ.

4. ದ್ವಾರಗೋಪುರ ಎನ್ನುವಂತಹ ಪ್ರವೇಶದ್ವಾರದ ಮೇಲಿನ ಗೋಪುರ.

5. ತೀರ್ಥಗಳು - ಆಲಯಗಳಿಗೆ ಹೊಂದಿಕೊಂಡ ಸ್ನಾನಕ್ಕಾಗಿ ಇರತಕ್ಕ ಪವಿತ್ರ ಜಲಾಶಯಗಳು - ಪುಷ್ಕರಿಣಿಗಳು.

6. ಪ್ರತಿಯೊಂದೂ ತಮ್ಮ ಖಚಿತ ಕಕ್ಷೆಯಲ್ಲಿರುವಂತಹ ಇತರ ಪರಿವಾರ ದೇವತೆಗಳ ಉಪದೇವಳಗಳು.

ಮೂಲಬೇರವನ್ನು ಸಾಮಾನ್ಯವಾಗಿ ಕಲ್ಲಿನಿಂದ ಮಾಡಲಾಗುತ್ತದೆ. ಆಗಮಶಾಸ್ತ್ರದ ಶಿಲ್ಪಶಾಸ್ತ್ರದ ಲಕ್ಷಣಗಳು ಹೇಳುವಂತೆ ಶಿಲ್ಪಿಯು ಅದನ್ನು ಕೆತ್ತಬೇಕಾಗುತ್ತದೆ. ಈ ನಿಯಮಗಳು ಅನುಲ್ಲಂಘನೀಯವಾದವು. ಕೆತ್ತನೆಯ ಕೆಲಸವನ್ನು ಆರಂಭಿಸುವ ಮೊದಲು ಶಿಲ್ಪಿಯು ತಾನು ಕೆತ್ತುವ ದೇವರನ್ನು ಧ್ಯಾನಿಸಿ ಶಿಲ್ಪಶಾಸ್ತ್ರ ವಿವರಿಸಿರುವಂತಹ ಸ್ವಾಮಿಯ ಚಿತ್ರವನ್ನು ಮನದಲ್ಲಿ ಶಾಶ್ವತವಾಗಿ ನಿಲ್ಲಿಸಿಕೊಳ್ಳಬೇಕು. ಆತನ ಶಿಲ್ಪ ನೈಪುಣ್ಯವು ಆತನ ಧ್ಯಾನಶಕ್ತಿಯ ಜೊತೆ ಸೇರಿ ವಿಗ್ರಹದ ತಯಾರಿಯಲ್ಲಿ ನೆರವು ನೀಡುತ್ತದೆ. ಅವನಿಗೆ ಈ ಧ್ಯಾನದಲ್ಲಿ ನೆರವು ನೀಡುವ ಹಲವಾರು ಧ್ಯಾನ ಶ್ಲೋಕಗಳಿವೆ. ವಿಗ್ರಹಗಳನ್ನು ಸಮಭಂಗಿ, ತ್ರಿಭಂಗಿಗಳಲ್ಲಿ ಮೂಡಿಸಬಹುದು. ವಿಗ್ರಹಗಳ ಜೊತೆಗೇ ಆಲಯದ ಗೋಡೆಗಳಲ್ಲಿಯೂ ವಿವಿಧ ಪುರಾಣದ ಕಥಾ ಸಂದರ್ಭಗಳನ್ನು ಸುಂದರವಾಗಿ ಕೆತ್ತಬಹುದಾಗಿದೆ.

ಪ್ರಾಚೀನ ಕಾಲದಲ್ಲಿ ಗ್ರಾಮದಲ್ಲಿ ಆಲಯಗಳು ಅತ್ಯಂತ ಚಟುವಟಿಕೆಯ ಕೇಂದ್ರಗಳಾಗಿದ್ದವು. ಇಡೀ ಗ್ರಾಮ ಜೀವನವೇ ಆಲಯದ ದೈನಿಕ ಕೆಲಸಕಾರ್ಯಗಳಿಗೆ ಹೊಂದಿಕೊಂಡು ನಡೆಯುತ್ತಿದ್ದಿತು. ವರ್ಷದ ಹನ್ನೆರಡು ತಿಂಗಳೂ ಆಲಯದಲ್ಲಿ ವಿವಿಧ ರೀತಿಯ ಉತ್ಸವಗಳನ್ನು ಏರ್ಪಡಿಸಲಾಗುತ್ತಿದ್ದಿತು. ಜೀವನದಲ್ಲಿ ಶ್ರೇಷ್ಠ ಪವಿತ್ರ ಎಂದು ಭಾವಿಸುವ ಎಲ್ಲವನ್ನೂ ಮೊದಲು ದೇವರಿಗೆ ಅರ್ಪಿಸಿ, ತದನಂತರ ಇತರರ ಅನುಭವಕ್ಕೆ ವಿತರಣೆ ಆಗುತ್ತಿದ್ದಿತು. ಈ ಆಲಯಗಳಲ್ಲಿ ನಡೆಯಬೇಕಾದ ಪೂಜೆ ಉತ್ಸವಗಳ ಬಗ್ಗೆ ವಿವರಗಳನ್ನು ನೀಡುವ ಆಗಮಗಳು ಮೂರು ಮುಖ್ಯ ಸಂಗತಿಗಳನ್ನು ತಿಳಿಸುತ್ತವೆ. ಅವುಗಳೆಂದರೆ ಸ್ಥಳ - ಆಲಯವಿರುವ ನೆಲೆ - ಕ್ಷೇತ್ರ. ತೀರ್ಥ ಪವಿತ್ರವಾದ ನೀರು, ಮೂರ್ತಿ - ಆಲಯದಲ್ಲಿ ಪೂಜೆ ಗೊಳ್ಳುವ ಮೂರ್ತಿ. ಸ್ಥಳ ವೃಕ್ಷಗಳೆಂದು ಕರೆಯಲ್ಪಡುವ ವಿವಿಧ ಆಲಯಗಳ ಪರಿಸರದಲ್ಲಿ ಬೆಳೆಸಬೇಕಾದ ಮರಗಳ ಬಗೆಗಿನ ವಿವರಗಳನ್ನೂ ಈ ಆಗಮಗಳು ನೀಡುತ್ತವೆ.

ಮುಖ್ಯ ಆಲಯದ ಬಗ್ಗೆ ಮಾತ್ರವೇ ಚಿಂತಿಸುವುದಾದರೆ ಇದನ್ನು ಮೂರು ವಿಧದಲ್ಲಿ ಚೌಕಾಕಾರವಾಗಿ (ಆಯತಾಕಾರವಾಗಿ) ಅಥವಾ ವೃತ್ತಾಕಾರವಾಗಿ ಅಥವಾ ನಕ್ಷತ್ರಾಕಾರವಾಗಿ ನಿರ್ಮಿಸಬಹುದು. ಚೌಕಾಕಾರದ ಆಲಯವನ್ನು ಸ್ಥಂಡಿಲವೆಂದೂ, ವೃತ್ತಾಕಾರದ ಆಲಯವನ್ನು ಮಂಡಲವೆಂದೂ ಕರೆಯುವರು. ಇವೆರಡೂ ಆಕಾರಗಳನ್ನು ವೇದಗಳ ಆಧಾರದಿಂದಲೇ ಪಡೆಯಲಾಗಿದೆ. ವೈದಿಕಯಜ್ಞಗಳಲ್ಲಿನ ಅಗ್ನಿಗುಂಡಗಳು ಚೌಕಾಕಾರ ಅಥವಾ ವೃತ್ತಾಕಾರವಿದ್ದು ಆಹವನೀಯ ಹಾಗೂ ಗಾರ್ಹಸ್ಪತ್ಯ ಅಗ್ನಿಗಳ ಕುಂಡಗಳು ಹೀಗೇ ಇರುತ್ತವೆ. ಈಗಲೂ ಸಹ ನಾವು ನಡೆಸುವ ಶ್ರಾದ್ಧ ಕಾರ್ಯಗಳಲ್ಲಿ ಆಹ್ವಾನಿಸುವ ಪಿತೃದೇವತೆಗಳಿಗೆ ಹಾಗೂ ವಿಶ್ವೇದೇವರುಗಳಿಗೆ ಬೇರೆ ಬೇರೆಯಾದ ಆಸನಗಳನ್ನು ನೀಡುತ್ತೇವೆ. ಪಿತೃದೇವತೆಗಳ ಮಂಡಲ ರೀತಿಯ ಆಸನ ನೀಡಿದರೆ ವಿಶ್ವೇದೇವತೆಗಳಿಗೆ ಸ್ಥಂಡುಲಾಸನ ನೀಡುತ್ತೇವೆ.

ನಕ್ಷತ್ರಾಕಾರದ ಆಲಯವು ಬಹು ಅಪರೂಪವಾಗಿರುವುದು. ಆಂಧ್ರಪ್ರದೇಶದಲ್ಲಿ ಚೇಜರ್ಲದ ಕಪೋತೇಶ್ವರಾಲಯವು ಮಾತ್ರ ಈ ರೀತಿಯಲ್ಲಿ ನಿರ್ಮಿತವಾಗಿದೆ. ಇದು ದಕ್ಷಿಣಾಗ್ನಿ ವಿಧಾನದ ಮಾದರಿಯಾಗಿರಬೇಕು.

ಆಲಯ ವಾಸ್ತುವಿನ ಬಗ್ಗೆ ಹೇಳುವುದಾದರೆ ಇದರಲ್ಲಿ ಮೂರುವಿಧ. ನಾಗರಿ, ವೇಸರ ಹಾಗೂ ದ್ರಾವಿಡ. ಆಗಮಗಳ ಪ್ರಕಾರ ನಾಗರ ಪದ್ಧತಿಯಲ್ಲಿ ಕಂಠದಿಂದ ಕಡೆಯವರೆಗೆ ಚತುರಶ್ರಾಕಾರವಾಗಿರುತ್ತದೆ. ದ್ರಾವಿಡ ಶೈಲಿಯು ಕಂಠದಿಂದ ಶಿರದವರೆಗೆ ಅಷ್ಟ ಭುಜವಾಗಿದ್ದು ವೇಸರ ಶೈಲಿಯಲ್ಲಿ ಕಂಠದಿಂದ ಶಿಖೆಯವರೆಗೆ ವರ್ತುಲಾಕಾರವುಂಟು.



ಅಕ್ಕರೆಯಲಿ ನೋಡೊ ಅರವಿಂದದಳಾಯತಾಕ್ಷ.

## ಆಲಯಗಳು ಹಾಗೂ ತೀರ್ಥಗಳು

ಜನನದಿಂದ ಮರಣದವರೆಗೆ ನಡೆಯುವ ಜೀವನ ಯಾತ್ರೆಯಲ್ಲಿ ಅನೇಕ ತಂಗುದಾಣಗಳು. ಭಾರತದಲ್ಲಿಯಾದರೋ ಮರಣವೆನ್ನುವುದೂ ಮತ್ತೊಂದು ವಿಶ್ರಾಮಘಟ್ಟವಾಗಿ ಯಾತ್ರೆ ಮುಗಿಯುವುದಿಲ್ಲ ಎಂದರೆ ಮರಣದಿಂದ ಮೋಕ್ಷವಾಗದು. ಎಲ್ಲ ರೀತಿಯ ಬಂಧನಗಳಿಂದ, ಕೊರತೆಗಳಿಂದ ಬಿಡುಗಡೆಯೆಂಬುದು ಬ್ರಹ್ಮವಿದ್ಯೆಯಿಂದ - ಪರಾಜ್ಞಾನದಿಂದ - ಉಂಟಾಗುತ್ತದೆ. ಈ ಪರಮನಡಿ ಕಾಣುವ ವಿದ್ಯೆಯೇ ಸಾಧನೆಯೂ ಸಿದ್ಧಿಯೂ ಆಗಿದೆ. ಇದೇ ಮುಕ್ತಿ. ಕೆಲವರಿಗೆ ಬದುಕಿದ್ದಾಗಲೇ ದೊರೆತರೆ ಜೀವನ್ಮುಕ್ತಿ ಕೆಲವರಿಗೆ ಈ ಲೋಕದಿಂದ ದೂರವಾದಾಗ ದೊರೆಯುತ್ತದೆ. ಆದರೆ ಈ ರೀತಿಯ ಪರಮಜ್ಞಾನವನ್ನು ಪಡೆಯಲಾರದ ಬಹುಮಂದಿಗೆ ಸಹ ಕೇಂದ್ರವನ್ನು ತಲುಪುವ ದಾರಿ ತೆರೆದೇ ಇರುವುದು. ಅದೆಂದರೆ ತೀರ್ಥಯಾತ್ರೆ. ತಮ್ಮ ಕರ್ಮಗಳ ಮೇಲೆ ಹತೋಟಿಯಿದ್ದವರಿಗೆ (ಇಂದ್ರಿಯಗಳನ್ನು ಗೆದ್ದವರಿಗೆ) ಯುಕ್ತಾಯುಕ್ತ ವಿವೇಚನೆ ಇದ್ದವರಿಗೆ, ಸನ್ಮಾರ್ಗ ಪ್ರವರ್ತಕರಿಗೆ ಇದರಿಂದಾಗಿ ಸಂತಸವೂ ಮೋಕ್ಷವೂ ದೊರೆಯುವುವು.

ಇಡೀ ದೇಶದ ತುಂಬೆಲ್ಲ ಈ ಯಾತ್ರಾಸ್ಥಳಗಳು ಹರಡಿದ್ದು ಇವುಗಳನ್ನು ತೀರ್ಥಗಳೆಂದೂ, ಕ್ಷೇತ್ರಗಳೆಂದೂ ಕರೆಯುವರು. ಈ ಪವಿತ್ರ ಕ್ಷೇತ್ರಗಳ ಸಂಖ್ಯೆ ತೀರ ಹೆಚ್ಚಾಗಿದೆ. ಮಹಾಭಾರತವು ನೂರಾರು ಪುಣ್ಯಕ್ಷೇತ್ರಗಳ ಬಗ್ಗೆ ಮಾತನಾಡುತ್ತದೆ.

ತೀರ್ಥವೆಂಬುದು ಸಮುದ್ರ ದಡದ ನದೀದಡದ ಅಥವಾ ಸರೋವರದ ದಡದಲ್ಲಿನ ಪುಣ್ಯಸ್ಥಳ. ತೀರ್ಥವೆಂದರೆ ಕಾಲುಹೊಳೆ ಅಥವಾ ದಾರಿ. ಪರಿಶುದ್ಧಗೊಳಿಸುವ ಫಲವತ್ತುಮಾಡುವ ನೀರು ಇರುವಂತಿದ್ದು ಜೀವನದ ಅಂತರಾರ್ಥವನ್ನು ತಿಳಿದು ದಾಟುವಂತೆ ಸಾಗಬಹುದಾದ್ದರಿಂದ ಯಾತ್ರಿಕನು ಇನ್ನೊಂದು ದಡವನ್ನು ತಲುಪುವಲ್ಲಿ ತೀರ್ಥಗಳು ನೆರವಿಗೆ ಬರುತ್ತವೆ.

ಕೇಂದ್ರದತ್ತಣ ಪಯಣಕ್ಕೆ ತೀರ್ಥಕ್ಷೇತ್ರ ಯಾತ್ರೆಯೇ ಕೊನೆಯ ಮಜಲು. ಆದರೆ ಇದೇ ಗಮ್ಯವಲ್ಲ. ಇಲ್ಲಿಂದ ಮುಂದೆ ಹಾಯ್ದು ಬಂದರೆ ಕೇಂದ್ರ ಗುರಿ ದೊರೆಯುವುದು ನಿಶ್ಚಯ. ಹೀಗಾಗಿಯೇ ತೀರ್ಥಕ್ಷೇತ್ರಗಳ ಸಂಖ್ಯೆ ಅಪಾರ.

ಭಾರತೀಯ ನೆಲದಲ್ಲಿನ ತೀರ್ಥಕ್ಷೇತ್ರಗಳಲ್ಲಿ ದೈವ ಸಾನ್ನಿಧ್ಯವಿರಲು ಅವಕಾಶವಿದೆ. ಈ ಸ್ಥಳದಲ್ಲಿ ಇಂತಹ ಅನುಭವವಾಗುವುದು ಸಹಜ. ಇಂತಹ ಕೇಂದ್ರಗಳ ಬಗ್ಗೆ ಜನರ ಅಭಿಮಾನ ಭಕ್ತಿಗಳು ಕೇಂದ್ರೀಕೃತವಾಗಿ ಇವುಗಳನ್ನು ಈ ಪ್ರದೇಶಗಳನ್ನು ನೆನಪಿನಲ್ಲಿ ಉಳಿಯುವಂತೆ ಮಾಡುತ್ತವೆ. ಇಂತಹ ಸ್ಥಳಗಳು ದೇವತೆಗಳ ಆಡುಂಬೊಲವಾಗಿರುತ್ತವೆ.

ಬೃಹತ್ ಸಂಹಿತೆ ಹೇಳುವಂತೆ ಎಲ್ಲ ಕಮಲ ಪುಷ್ಪಗಳನ್ನು ತಮ್ಮ ಎದೆಯಿಂದ ಆಚೀಚೆ ತಳ್ಳುತ್ತ ನೀರಿನಲ್ಲಿ ಈಜುವ ಹಂಸಗಳು ನೀರಿನಲ್ಲಿಯೇ ದಾರಿಯನ್ನುಂಟುಮಾಡುವುವೋ ಅಂತಹ ಕಡೆಗಳಲ್ಲಿ ದೇವತೆಗಳು ಕ್ರೀಡಾತುರರಾಗಿ ಓಡಿಯಾಡುವರು. ಹಂಸಗಳು, ಬಾತುಕೋಳಿಗಳು, ಭತ್ತದ ಗದ್ದೆಯ ಹಕ್ಕಿಗಳು ಹಾರಾಡುತ್ತ ಕಲರವನಾದ ಮಾಡುತ್ತ ಇರುತ್ತವೆ. ನದಿಯ ದಡದ ನಿಚುಲ ವೃಕ್ಷಗಳ ನೆರಳಿನಲ್ಲಿ ಜಾನುವಾರುಗಳ ಆರಾಮವಾಗಿ ಮಲಗಿರುತ್ತವೆ. ಇಂತಲ್ಲಿ ದೇವತೆಗಳು ಆಡುತ್ತಿರುತ್ತಾರೆ.

ಹರಿವ ನೀರಿನ ಝುಳುಝುಳು ನಾದವೇ ಗೆಜ್ಜೆಯ ಶಬ್ದವಾಗಿ ಆ ನೀರಿನಲ್ಲಿ ಈಜುವ ಹಂಸಗಳ ಕಲರವವೇ ಮಾತಾಗಿ, ಹರಿಯುವ ನೀರೇ ಉಡುಪು ಎಂದೆನಿಸಿ, ನೀರಿನ ದಡದಲ್ಲಿನ ಗಿಡಗಳಲ್ಲಿ ಅರಳಿರುವ ಹೂವುಗಳೇ ಕರ್ಣಪತ್ರಗಳಾಗಿ, ವಿವಿಧ ಹೊಳೆಗಳ ಸಂಗಮವೇ ಪೃಷ್ಠಗಳಾಗಿ, ನದಿಗಳ ದಡದ ಮರಳಿನ ದಿಬ್ಬಗಳೇ ಸ್ತನಗಳಾಗಿ ಹಾರುವ ಹಂಸಗಳೇ ಕಿರೀಟದ ಮುಡಿಯಾಗಿರುವ ನದಿಗಳ ದಡಗಳಲ್ಲಿ ದೇವತೆಗಳು ಕ್ರೀಡಿಸುತ್ತಾರೆ.

ನದಿಗಳೂ, ಪರ್ವತಗಳೂ, ನೀರಿನ ಚಿಲುಮೆಗಳು, ನಗರದ ಉದ್ಯಾನಗಳು, ತೋಪುಗಳಲ್ಲಿ ದೇವತೆಗಳು ಯಾವಾಗಲೂ ಆಡುತ್ತಿರುತ್ತಾರೆ. ಇಂತಹ ಸ್ಥಳಗಳ ಬಗ್ಗೆ ದೇವತೆಗಳು ಆದರ ಹೊಂದಿ ಇಲ್ಲಿ ಇರಬಯಸುವರು.

ಆಲಯ ಸಂಪ್ರದಾಯಗಳ ಬಗ್ಗೆ ಮತ್ತೊಂದು ಪ್ರಾಚೀನ ಗ್ರಂಥ ನೀಡುವ ವಿವರ ಹೀಗಿದೆ -

''ನದೀ ದಂಡೆಗಳಲ್ಲಿ, ಸರೋವರದ ದಡಗಳಲ್ಲಿ ಸಮುದ್ರ ತಟಿಯಲ್ಲಿ ಮಾತ್ರವೇ ದೇವರನ್ನು ಪ್ರತಿಷ್ಠಿಸಬೇಕೆಂದೇನಿಲ್ಲ. ಗಿರಿ ಶಿಖರಗಳಲ್ಲಿ, ಪರ್ವತ ಕಂಧರಗಳಲ್ಲಿ, ಅರಣ್ಯಪ್ರದೇಶಗಳಲ್ಲಿ ಉಪವನ ಉದ್ಯಾನವನಗಳಲ್ಲಿ, ಆಶ್ರಮಗಳಲ್ಲಿ ಗ್ರಾಮ ನಗರಗಳಲ್ಲಿ ದೇವರ ವಿಗ್ರಹ ಪ್ರತಿಷ್ಠಾಪನೆಯಾಗಬಹುದು. (ತಂತ್ರ ಸಮುಚ್ಚಯ) ಒಟ್ಟಿನಲ್ಲಿ ಹೇಳುವುದಾದರೆ ಆಲಯವಿರುವ ಪ್ರದೇಶ ಯಾವುದಾದರೂ ಅದು ತೀರ್ಥವೇನೇ. ವಿಷ್ಣು ಧರ್ಮೋತ್ತರ ಪುರಾಣವು ಅರ್ಚಾವಿಗ್ರಹಗಳ ಪ್ರತಿಷ್ಠೆಯ ಬಗ್ಗೆ ಹೇಳುವುದೆಂದರೆ'' ವಿಗ್ರಹ ಪ್ರತಿಷ್ಠಾಪನೆಯು ಕೋಟೆಗಳಲ್ಲಿನ ನಗರಗಳಲ್ಲಿನ ಅಂಗಡಿ ಬೀದಿಗಳ ಕೊನೆಯಲ್ಲಿ ಆಗಬೇಕು. ಗ್ರಾಮಗಳಲ್ಲಿಯಾದರೋ ಅಂಗಡಿಗಳಿಲ್ಲದ ಮನೆಗಳಿಲ್ಲದ ಪ್ರತ್ಯೇಕ ಸ್ಥಳಗಳಲ್ಲಿ ಆಗಬೇಕು. ಅರಣ್ಯಗಳಲ್ಲಿ, ಉಪವನಗಳಲ್ಲಿ, ಕೊಳಗಳ ಬದಿಯಲ್ಲಿ, ಪರ್ವತ ಶಿಖರಗಳಲ್ಲಿ, ಸುಂದರವಾದ ಕಣಿವೆಗಳಲ್ಲಿ ಗುಹೆಗಳಲ್ಲಿ ವಿಗ್ರಹ ಪ್ರತಿಷ್ಠೆ ಆಗಬಹುದು. ನೀರಿಲ್ಲದ ಎಡೆಗಳಲ್ಲಿ ದೇವತೆಗಳ ಉಪಸ್ಥಿತಿಯಿಲ್ಲ. ಹೀಗಾಗಿ ಎಲ್ಲಿ ಎಡಗಡೆಗೆ ಅಥವಾ ಎದುರಿಗೆ ಜಲದ ಅವಕಾಶವಿದೆಯೋ ಅಲ್ಲಿ ವಿಗ್ರಹ ಪ್ರತಿಷ್ಠಾಪನೆ ಆಗಬಹುದು.'' ದ್ವೀಪದಲ್ಲಿ ಆಲಯವನ್ನು ನಿರ್ಮಿಸಿದಲ್ಲಿ ಸುತ್ತ ನೀರು ಇರುವಂತಾಗಿ ಪವಿತ್ರವಾಗಿರುವುದು.

ನೀರಿನ ಉಪಸ್ಥಿತಿ ಅತ್ಯಗತ್ಯ. ಆದರೆ ಅದು ನೈಸರ್ಗಿಕವಾಗಿ ಅಥವಾ ಪ್ರಯತ್ನಪೂರ್ವಕವಾಗಿ ದೊರೆಯದಿದ್ದಲ್ಲಿ ಆಲಯದ ಅಥವಾ ವಿಗ್ರಹದ ಕೆಳಭಾಗದಲ್ಲಿ ಸಾಂಕೇತಿಕವಾಗಿ ದೊರೆಯುವುದೆಂದು ಭಾವನೆ. ಹೀಗಾಗಿ 'ಅಧಿವಾಸ' ಕಾಲದಲ್ಲಿ (ವಿಗ್ರಹಕ್ಕೆ ದೇವರ ಸನ್ನಿಧಿಯನ್ನುಗಳಿಸಿಕೊಳ್ಳುವ ಪ್ರಕ್ರಿಯೆ) ವಿಗ್ರಹವನ್ನು ಒಂದು ಕೆರೆ ಹೊಳೆ ನದಿಯ

ನೀರಿನಲ್ಲಿ ಸ್ವಲ್ಪ ಮೇಲಕ್ಕೆ ಕಟ್ಟಿದ ಮಂಚದಲ್ಲಿ ನೀರಿನೊಳಗೆ ಮುಳುಗಿಸಿ ಇಡುತ್ತಾರೆ. ಯೋಗೇಶ್ವರನಿಗೆ ನಿವೇದನೆಯನ್ನು ಅರ್ಪಿಸುವರು. ಶಬ್ದಬ್ರಹ್ಮನ ಪೂಜೆ ಯಾಗುವುದು. ಸಾಗರಗಳು, ಪರ್ವತಗಳು, ಋಷಿಗಳು, ಪಿತೃಗಳು, ಭೂತಗಣ, ವರುಣ ರುದ್ರ ಮರುತರಿಗೆ ಪೂಜೆಗಳಾಗುವುವು. ನದಿ ಹೊಳೆ ಕೆರೆ ಕುಂಟೆಗಳಿಲ್ಲದಿರುವಲ್ಲಿ ಮೂರು ಕುಂಭಗಳ ನೀರನ್ನು ಬ್ರಹ್ಮಸ್ಥಾನದಲ್ಲಿಡುವರು (ಕ್ಷೇತ್ರದ ಕೇಂದ್ರ).

ತೀರ್ಥವಿರುವಲ್ಲಿ ಆಲಯಗಳ ನಿರ್ಮಾಣವಾಯಿತು. ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವಂತೆ ಅದರ ಎಲ್ಲ ಭಾಗಗಳೂ ರೂಪುಗೊಂಡವು. ಹಂತ ಹಂತವಾಗಿ, ಮೆಟ್ಟಲು, ಮೆಟ್ಟಿಲಾಗಿ, ಇವುಗಳ ನೋಡುವವರ ಮನವನ್ನು ಆವರಿಸಿ ಈ ಲೋಕದಿಂದ ಮೇಲಿನ ಲೋಕಗಳ ಕಡೆಗೆ ಒಯ್ಯುವಂತೆ ರೂಪುಗೊಂಡವು. ಹಿರಿದಾದ ಅಸ್ತಿವಾರದೊಡನೆ ಇವು ಮೇಲೇಳು ವಂತಾಯಿತು. ವಿವಿಧ ಶೈಲಿ ಪದ್ಧತಿಗಳಿಗೆ ತಕ್ಕಂತೆ ಕಾಲ ದೇಶಗಳಲ್ಲಿ ಪರಿವರ್ತನೆ ಹೊಂದುತ್ತ ಬೆಳೆದವು. ಇಂದು ದಕ್ಷಿಣ ಭಾರತದಲ್ಲಿ ಕಂಡು ಬರುವಂತೆ ಅಗಲ ತಳದಿಂದ ಪಿರಮಿಡ್ ಆಕಾರ ದಲ್ಲಿ ಮೇಲೇರುವುವು ಉತ್ತರ ಭಾರತ ದಲ್ಲಿಯಾದರೋ ವೃತ್ತಾಕಾರವಾಗಿ ಬೆಳೆದು ಶಿಖರದಲ್ಲಿ ಸೇರುವಂತೆ ಚೂಪು ಮುಖವಾಯಿತು.

ಹಲವು ಬಾರಿ ಆಲಯಗಳು ಅನೇಕ ದೇವತೆಗಳ ಒಂದು ಮಹಾ ನಗರವೇ ಆಗಿಬಿಡಬಹುದು. ಇಲ್ಲಿನ ನಿರ್ಮಾಣವು ಒಂದು ಆಲಯ ಸಮುದಾಯವಾಗಿದ್ದು ಪ್ರತ್ಯೇಕ ಆಲಯವೂ ಸಣ್ಣದಾಗಿರುತ್ತದೆ. ಯಾವುದೇ ಆಲಯವು ಎಲ್ಲಿಯೇ ನಿಂತಿರಲಿ ಯಾವ ಕಾಲದಲ್ಲಿ ಕಟ್ಟಿರುವಂತಹದೇ ಆಗಿರಲಿ ಅದು ಒಂದೇ ಸೂತ್ರದನ್ವಯ ನಿರ್ಮಾಣ ವಾಗಿರುತ್ತದೆ. ಅದೆಂದರೆ ವಾಸ್ತು ಪುರುಷ ಮಂಡಲ.

## ಸಾಮಾಜಿಕ ಕೇಂದ್ರವಾಗಿ ಆಲಯ

ಆಲಯದ ಸುತ್ತಲೂ ಸಮುದಾಯದ ಸಾಮಾಜಿಕ ಜೀವನವು ಹರಡಿದ್ದಿತು. ಆಲಯದ ಕೆಲಸಗಳನ್ನು ಗ್ರಾಮದ ಜನರೆಲ್ಲ ಸಮಾನವಾಗಿ ಹಂಚಿಕೊಂಡು ಮಾಡುತ್ತಿದ್ದರು. ಆಲಯದ ಹಲವು ಮಂಟಪಗಳಲ್ಲಿ ಪುರಾಣಗಳ ಇತಿಹಾಸಗಳ ವಿವರಗಳನ್ನು ನೀಡಲಾಯಿತು. ಇಲ್ಲಿ ಧರ್ಮಶಾಸ್ತ್ರಗಳನ್ನೂ ವಿವರಿಸಲಾಯಿತು. ಪುರಾಣ ಪ್ರವಚನವೂ ನಡೆಯುತ್ತಿದ್ದವು. ಹಲವು ಆಲಯಗಳಲ್ಲಿನ ರಂಗಮಂಟಪಗಳಲ್ಲಿ ನೃತ್ಯ ಸಂಗೀತ ಕಾರ್ಯಕ್ರಮಗಳೂ ನಡೆಯುತ್ತಿದ್ದವು. ಆಲಯಗಳಲ್ಲಿ ತುಲಾಭಾರವನ್ನೂ ಹಿರಣ್ಯದಾನವನ್ನೂ ರಾಜರುಗಳು ನಡೆಸುತ್ತಿದ್ದರು. ಆಲಯಗಳು ಶಿಕ್ಷಣ ಕೇಂದ್ರಗಳೂ ಆಗಿ ಶ್ರುತಿಸ್ಮೃತಿಗಳ ಪಾಠವೂ ನಡೆಯುತ್ತಿದ್ದಿತು. ಜೊತೆಗೇ ವರ್ಷದ ಹನ್ನೆರಡು ತಿಂಗಳೂ ವಿವಿಧ, ಉತ್ಸವ, ಹಬ್ಬಗಳು ಆಚರಿಸಲ್ಪಟ್ಟು ದೇವರನ್ನು ಪ್ರತ್ಯಕ್ಷ ರಾಜನಂತೆಯೇ ನೋಡಿ ರಾಜನಿಗೆ ಹೊಂದುವ ಸಕಲಗೌರವಗಳನ್ನು ಅವನಿಗೆ ನೀಡಲಾಗುತ್ತಿದ್ದಿತು. ಉದಾಹರಣೆಗಾಗಿ ತಿರುಮಲೆಯ ಆಲಯದಲ್ಲಿ ಪ್ರತಿದಿನವೂ ಪಂಚಾಂಗ ಶ್ರವಣ ನಡೆದು ರಾಜಾಸ್ಥಾನದಲ್ಲಿ ಲೆಕ್ಕ ಪತ್ರಗಳನ್ನು ಒಪ್ಪಿಸುವಂತೆಯೇ ಸಮರ್ಪಿಸಲಾಗುತ್ತದೆ. ಹೀಗೆ ನಮ್ಮ ನಾಡಿನಲ್ಲಿ ಆಲಯಗಳು ಒಂದು ಪ್ರತ್ಯೇಕವಾದ ವಿಶಿಷ್ಟವಾದ ಸಂಸ್ಥೆಯಾಗಿವೆ. ಇಂತಹ ಸಂಸ್ಥೆಗಳು ಇತರೆಡೆಯಲ್ಲಿ ಕಂಡು ಬರುವುದಿಲ್ಲ. ಆಲಯವು ಸಾಮಾಜಿಕ ಜೀವನದ ಕೇಂದ್ರವಾಗಿ ಇಡೀ ಭಾರತೀಯ ಜೀವನವು ಧಾರ್ಮಿಕ ಆಧಾರದಲ್ಲಿ ಬೆಳೆದಿರುವುದಾಗಿದೆ. ಇಲ್ಲಿ ಎಲ್ಲ ರೀತಿಯ ಜನರನ್ನು ಕಾಣಬಹುದು. ಕುಂಡಲಿನಿಯ ಸಾಧನೆಯಲ್ಲಿ ತೊಡಗಿದ ಯೋಗಿ, ದೈವದ ಬಗ್ಗೆ ಕಾಳಜಿ ಹೊಂದಿದ ಜೀವನ್ಮುಕ್ತ, ದೇವರಿಗೆ ತಮ್ಮ ಸಾಧನಾಫಲವಾಗಿ ಸಂಗೀತ ನೃತ್ಯವನ್ನು ಸಮರ್ಪಿಸುವ ಕಲಾವಿದರು, ಆಧ್ಯಾತ್ಮಿಕ ಅನುಭಾವದಲ್ಲಿ ಪರವಶವಾಗಿರುವ ಭಕ್ತರು, ರಸಾರ್ದ್ರವಾದ ಸಂಕೀರ್ತನ ಸೃಷ್ಟಿಯಲ್ಲಿ ತೊಡಗಿರುವ ಭಕ್ತ ಕವಿಗಳು, ಸ್ವಾಮಿಗೆ ತಮ್ಮ ಅರೆಕೊರೆಗಳನ್ನು ತಿಳಿಸುತ್ತ ಸರಿಪಡಿಸಲು ಮೊರೆಯಿಡುತ್ತಿರುವ ಗೃಹಸ್ಥರು, ಆರೋಗ್ಯಕ್ಕಾಗಿ ಅಭ್ಯರ್ಥನೆ ನಡೆಸಿರುವ ಜರಾಬಂಧಿತರು, ಅರ್ಥಕ್ಕಾಗಿ ಬೇಡುವ ಆರೋಗ್ಯವಂತರು, ಹೀಗೆ ಮೊದಲಾಗಿ ವಿವಿಧ ರೀತಿಯ ಜನಗಳನ್ನು ಕಾಣಬಹುದು.

ಮೇಲೆ ವಿವರಿಸಿದ ಆಲಯ ಪರಿಕಲ್ಪನೆಗೆ ತಿರುಮಲೆಯ ಆಲಯವು ಸಾಧಾರಣವಾಗಿ ಉದಾಹರಣೆಯಾಗುತ್ತದೆ.

## ವಿಶಿಷ್ಟ ಆಚಾರ ಪರಂಪರೆ

ಪ್ರಾಚೀನ ಕಾಲದಿಂದಲೂ ಆಚರಣೆ ಯಲ್ಲಿದ್ದು ಹಲವು ವಿಶಿಷ್ಟವಾದ ಆಚಾರಗಳು ತಿರುಮಲೆಯಲ್ಲಿ ಪವಿತ್ರವೆಂದು ಪರಂಪರಾಗತ ವಾಗಿ ನಂಬಲಾಗಿದೆ. ಹಿಂದೆಯೇ ಹೇಳ ಲಾಗಿರುವ ವೆಂಕಟಾಚಲ ಇತಿಹಾಸ ಮಾಲೆ ಪುಸ್ತಕವು ರಾಮಾನುಜರಿಂದ ಪ್ರವೇಶವಾದ ಹಲವು ಆರಾಧನಾ ವಿಧಿಗಳನ್ನು ಹೆಸರಿಸುತ್ತದೆ. ಇತಿಹಾಸ ಮಾಲೆಯ ನಾಲ್ಕನೆಯ ಸ್ತಬಕದಲ್ಲಿ ಈ ವಿವರಗಳು ಚಿತ್ರಿತವಾಗಿವೆ. ಅವುಗಳೆಂದರೆ -

1. ದೇವರ ಮುಖಕ್ಕೆ ಪಚ್ಚ ಕರ್ಪೂರದ ತೊಡವು ಇರಬೇಕು.

2. ದೇವರ ಹಣೆಯಲ್ಲಿ ಸೋಮವಾರ ಮಂಗಳವಾರ ಬುಧವಾರಗಳಲ್ಲಿ ತಿರುಮಣ್ ನಾಮ ವಿರಬೇಕು.

3. ದೇವರ ಕಣ್ಣುಗಳಿಗೆ ಕಾಡಿಗೆಯನ್ನು ಹಚ್ಚಬೇಕು.

4. ಗುರುವಾರಗಳಂದು ಸ್ವಾಮಿಯ ಎಲ್ಲ ಆಭರಣಗಳನ್ನೂ ತೆಗೆದು ಹೂವಿನ ಅಲಂಕಾರ ಮಾಡಬೇಕು.

5. ಶುಕ್ರವಾರಗಳಂದು ಈ ಹೂವಿನ ಅಲಂಕಾರವನ್ನು ತೆಗೆದು ದೇವರಿಗೆ ಅಭಿಷೇಕ ಮಾಡಿ ತಿರುಮಣ್ ನಾಮವನ್ನು ಹಚ್ಚಬೇಕು.

6. ಶುಕ್ರವಾರಗಳಲ್ಲಿ ಸ್ವಾಮಿ ವಕ್ಷಃಸ್ಥಲದಲ್ಲಿನ ಲಕ್ಷ್ಮಿಯನ್ನು ಅಭಿಷೇಕ ಸಮಯದಲ್ಲಿ ತೆಗೆಯುವಾಗ ನಾಚ್ಚಿಯಾರ್ ತಿರುಮೊಳಿಯನ್ನು ಹಾಡಬೇಕು.

7. ತಿರುಮಲೆಯಲ್ಲಿ ವರಾಹಸ್ವಾಮಿಯ ಪೂಜೆ ಮೊದಲಿಗೆ ಆಗಬೇಕು. ಈ ದೇವರಿಗೇ ಮೊದಲು ನೈವೇದ್ಯವಾಗಬೇಕು. ಯಾತ್ರಿಕರು ತಿರುಮಲೆಯಲ್ಲಿ ಶ್ರೀ ವೇಂಕಟೇಶ್ವರಸ್ವಾಮಿಯನ್ನು ಪೂಜಿಸುವ ಮೊದಲು ವರಾಹಸ್ವಾಮಿಯನ್ನು ಪೂಜಿಸಬೇಕು.

8. ಈ ಪರ್ವತವು ಪವಿತ್ರವಾದುದಾಗಿ ಇಲ್ಲಿ ದೇವರನ್ನು ಸೇವಿಸುವವರು ಮಾತ್ರವೇ ವಸತಿ ಮಾಡಬೇಕು.

9. ಪರ್ವತದ ಮೇಲೆ ಜೀವಹಿಂಸೆ ಮಾಡಬಾರದು. ಬೆಟ್ಟದ ಮೇಲೆ ಮರಣ ಹೊಂದಿದವರನ್ನು ಬಯಲಿಗೆ ತರಬೇಕು. (ಕೆಳಕ್ಕೆ ಇಳಿಸಬೇಕು.)

10. ತಿರುಮಲೆಗೆ ಹೋಗುವಾಗ ಯಾತ್ರಿಕರು ಪಾದರಕ್ಷೆಗಳನ್ನು ಧರಿಸಬಾರದು.

ಮೇಲಿನವುಗಳಲ್ಲಿ ಬಹುತೇಕ ಆಚಾರಗಳನ್ನು ರಾಮಾನುಜರು ಪ್ರವೇಶಗೊಳಿಸಿದರೆಂದು ಹೇಳಲಾಗಿದೆ. ಏನೇ ಆದರೂ ಶತಮಾನಗಳ ಕಾಲಾವಧಿಯಲ್ಲಿ ಬದಲಾದ ಪರಿಸ್ಥಿತಿಗಳಿಗೆ ಅನುಗುಣವಾದಂತೆ ಅವುಗಳಲ್ಲಿ ಹಲಕೆಲವು ಬದಲಾವಣೆಗಳಾಗಿವೆ. ಉದಾಹರಣೆಗೆ ಸ್ವಾಮಿಯ ನಾಮವು ಇಂದೂ ಪಚ್ಚ ಕರ್ಪೂರದಿಂದಲೇ ಆಗುವುದಾದರೂ ಸೋಮ ಮಂಗಳ ಬುಧವಾರಗಳಲ್ಲಿ ತಿರುಮಣ್ ಹಚ್ಚುವುದಿಲ್ಲ. ಪಚ್ಚಕರ್ಪೂರವನ್ನು ಕಣ್ಣುಗಳ ಭಾಗವೂ ಸೇರಿದಂತೆ ದಪ್ಪವಾಗಿ ಶುಕ್ರವಾರಗಳಲ್ಲಿ ಹಚ್ಚಲಾಗುವುದು. ಇದನ್ನು ಗುರುವಾರಗಳಲ್ಲಿ ಅತಿ ಸಣ್ಣದಾಗಿ ಮಾಡಿ ಅಭಿಷೇಕದ ಹೊತ್ತಿನಲ್ಲಿ ಪೂರ್ತಿಯಾಗಿ ತೆಗೆಯಲಾಗುತ್ತದೆ.

ಆಲಯದಲ್ಲಿ ಮತ್ತೂ ಹಲವಾರು ವಿಶಿಷ್ಟವಾದ ಕ್ರಮಗಳು ಪರಂಪರೆಯಿಂದ ಆಚರಿಸಲ್ಪಟ್ಟು ಪಾವಿತ್ರ್ಯವನ್ನು ಹೊಂದಿವೆ. ಅವುಗಳೆಂದರೆ -

1. ಆಲಯದ ಅರ್ಚನಾ ವಿಧಾನ ಪಾಂಚರಾತ್ರಾಗಮದಂತೆ ಅಲ್ಲದೆ ವೈಖಾನಸ ಆಗಮವನ್ನನುಸರಿಸಿದೆ.

2. ಪ್ರತಿದಿನವೂ ಮೂಲವಿಗ್ರಹದ ಗಲ್ಲಕ್ಕೆ 1½ ತೊಲ ಪಚ್ಚಕರ್ಪೂರವನ್ನು ಹಚ್ಚುವರು.

3. ತಿರುಮಲೆಯ ದೇವರಿಗೆ ಪ್ರತಿ ಶುಕ್ರವಾರ ತಿರುಮಂಜನವಾಗುತ್ತದೆ (ಅಭಿಷೇಕ) ದೇವರ ವಕ್ಷಃಸ್ಥಲ ಭಾಗವಾದ ಲಕ್ಷ್ಮಿಯ ವಿಗ್ರಹಕ್ಕೆ ಅಭಿಷೇಕ ಮಾಡುವಾಗ ಅರಿಷಿಣವನ್ನು ಬಳಸಲಾಗುತ್ತದೆ.

4. ಪ್ರತಿ ದಿನವೂ ಇಲ್ಲಿರುವ ಭೋಗ ಶ್ರೀನಿವಾಸ ಅಥವಾ ಭೋಗಮೂರ್ತಿಗೆ ಅಭಿಷೇಕ ನಡೆಯುವುದು.

5. ಸ್ವಾಮಿಯ ವಿಗ್ರಹಕ್ಕೆ ಪುನುಗು ಎಣ್ಣೆಯನ್ನು ಸಂರಕ್ಷಕವನ್ನಾಗಿ ಹಚ್ಚಲಾಗುವುದು.

6. ವರಾಹ ಪುರಾಣದಲ್ಲಿ ಉಕ್ತವಾಗಿರುವಂತೆ ಶ್ರೀ ವೆಂಕಟೇಶ್ವರ ಅಷ್ಟೋತ್ತರ ಸಹಸ್ರನಾಮಗಳು ಹೇಳಿಕೊಂಡು ಅರ್ಚನೆ ಮಾಡುವರು.

7. ಶುಕ್ರವಾರಾಭಿಷೇಕ ಸಮಯದಲ್ಲಿ ಹೇಳುವ ಮಂತ್ರಗಳು ಪುರುಷಸೂಕ್ತ ವಿಧಾನವನ್ನು ಅನುಸರಿಸುತ್ತವೆ. ಶ್ರೀಮನ್ನಾರಾಯಣನು ಒಬ್ಬನೇ ಎಂದೂ, ಎಲ್ಲ ದೇವರ ಪೂಜೆಯೂ ಆತನನ್ನೇ ಸೇರುತ್ತದೆ ಎಂದೂ ಹೇಳತಕ್ಕ ಮಂತ್ರ ಪುಷ್ಪ ಶ್ಲೋಕಗಳನ್ನು ಹೇಳಿಕೊಂಡು ಅಭಿಷೇಕ ಮಾಡುವರು.

8. ಅಭಿಷೇಕದ ನಂತರ ಪ್ರಬಂಧ ಪಠಣವಾಗಿ, ತೈತ್ತಿರೀಯ ಉಪನಿಷತ್ ಮಂತ್ರಗಳನ್ನು ಹೇಳಲಾಗುವುದು.

9. ದೇವರಿಗೆ ಮುಡಿಯನ್ನು ಕೊಡುವುದು ಇಲ್ಲಿನ ಸಂಪ್ರದಾಯ.

10. ಸ್ವಾಮಿಯನ್ನು ಎಬ್ಬಿಸುವ ಸುಪ್ರಭಾತದ ಆಚರಣೆ.

11. ಸ್ವಾಮಿಯನ್ನು ಪ್ರತಿದಿನವೂ ರಾತ್ರಿ ಮಲಗಿಸುವ ಏಕಾಂತಸೇವೆ.

12. ಆಲಯದಲ್ಲಿ ಚಾಂದ್ರಮಾನ ಪಂಚಾಂಗವನ್ನು ಅನುಸರಿಸಲಾಗುವುದು.

**ದೇವರ ಗಲ್ಲಕ್ಕೆ ಪಚ್ಚಕರ್ಪೂರದ ಆಚ್ಛಾದನೆ :**

ದೇವರ ಗಲ್ಲದಲ್ಲಿ ಪಚ್ಚಕರ್ಪೂರ ಹಚ್ಚಿರುವುದನ್ನು ಯಾವಾಗಲೂ ಕಾಣಬಹುದು. ಈ ಒಂದು ಕುತೂಹಲಕಾರಿ ವಿಷಯವನ್ನು ವಿವರಿಸುವ ಐತಿಹ್ಯವು ಹೀಗೆ ಸಾಗುತ್ತದೆ.

ರಾಮಾನುಜರು ತಮ್ಮ ಶಿಷ್ಯನಾದ ಅನಂತಾಳ್ವಾನ್ ಅನ್ನು ತಿರುಮಲೆಯ ಸ್ವಾಮಿಯ, ಸೇವೆಗೆ ಕಳುಹಿಸಿದರು. ಶ್ರೀನಿವಾಸನ ಪೂಜೆಯಲ್ಲಿ ದಿನವೂ ಪುಷ್ಪಗಳನ್ನು ಒದಗಿಸಲೆಂದು ಒಂದು ನಂದನ ವನವನ್ನು ಬೆಳೆಸುವುದು ಅನಂತಾರ್ಯನ ಕೈಂಕರ್ಯ. ಆತ ಹೂವಿನ ತೋಟದ ಕೆಲಸದಲ್ಲಿ ಅತ್ಯಂತ ಉತ್ಸಾಹಿಯಾಗಿ ಭಾಗವಹಿಸುತ್ತಿದ್ದ. ಗರ್ಭವತಿಯಾದ ಆತನ ಪತ್ನಿಯೂ ಪತಿಯ ಕೆಲಸದಲ್ಲಿ ಸಹಾಯ ಮಾಡುತ್ತಿದ್ದಳು. ಒಮ್ಮೆ ಅನಂತಾರ್ಯನು ತೋಟದಲ್ಲಿ ನೆಲವನ್ನು ಅಗೆಯುತ್ತ ಪಾತಿಗಳನ್ನು ಮಾಡುತ್ತಿದ್ದ. ಆತನ ಪತ್ನಿ ಮಣ್ಣನ್ನು ಮಕ್ಕರಿಯಲ್ಲಿ ಎತ್ತಿ ಆಚೆಗೆ ಹಾಕುತ್ತಿದ್ದಳು. ತಲೆಯ ಮೇಲೆ ಭಾರವನ್ನು ಹೊತ್ತು ನಡೆಯುವಾಗ ಆಕೆಗೆ ಮಣ್ಣು ಸಾಗಿಸುವ ಕೆಲಸದಲ್ಲಿ ನೆರವಾಗಿ ತೊಡಗಿದ. ಇದನ್ನು ಗಮನಿಸಿದ ಅನಂತಾರ್ಯನಿಗೆ ಕೋಪ ಬಂತು- ತಾವು ಸ್ವಾಮಿಯ ಸೇವೆ ಮಾಡುತ್ತಿದ್ದರೆ ಇವ ಯಾರು ಮಧ್ಯದಲ್ಲಿ ಸಹಾಯಕ್ಕೆ ಬರಲು ಎಂಬುದಾಗಿ ತನ್ನ ಕೈಲಿದ್ದ ಗಡಾರಿಯಲ್ಲಿ ಒಂದೇಟು ಹಾಕಿದ. ಪೆಟ್ಟು ತಿಂದ ಬ್ರಹ್ಮಚಾರಿ ಓಡಿಹೋಗಿ ಮಾಯವಾದ. ನಂತರ ಅನಂತಾರ್ಯನು ಪೂಜೆಗೆಂದು ದೇವಾಲಯಕ್ಕೆ ಬಂದ. ಸ್ವಾಮಿಯ ಗಲ್ಲದಿಂದ ರಕ್ತ ಸೋರುತ್ತಿದೆ. ಬ್ರಹ್ಮಚಾರಿಯೇ ಸ್ವಾಮಿ ಎಂಬುದನ್ನು ತಿಳಿಯಲು ಹೊತ್ತು ಬೇಕಾಗಲಿಲ್ಲ. ರಕ್ತಸ್ರಾವವನ್ನು ನಿಲ್ಲಿಸಲು ಕೂಡಲೇ ಪಚ್ಚಕರ್ಪೂರದ ಪಟ್ಟು ಹಾಕಿದ. ಕ್ಷಮಾಯಾಚನೆ ಮಾಡಿದ. ಸ್ವಾಮಿ ಅವನನ್ನು ಕ್ಷಮಿಸಿ, ಅವನ ನೆನಪಿನಲ್ಲಿ ಆ ಗಲ್ಲದ ಹುಲ್ಲು ಶಾಶ್ವತವಾದ ಗುರುತಾಗಿರುವಂತೆ, ಮಾಡಿಕೊಳ್ಳುವುದಾಗಿ ಭರವಸೆ ನೀಡಿದ.

ಅನಂತಾರ್ಯನ ಬಗ್ಗೆ ಇನ್ನೊಂದು ಐತಿಹ್ಯವೂ ಇದೆ. ಅದು ಹೂವಿನಹಾರದ ಸಮರ್ಪಣೆ. ಒಮ್ಮೆ ಸ್ವಾಮಿಯೂ ಶ್ರೀಸತಿಯೂ ರಾಜಕುಮಾರ ರಾಜಕುಮಾರಿಯರಂತೆ ನವಯವ್ವನದವರಾಗಿ ಅನಂತಾರ್ಯನ ನಂದನ ವನದಲ್ಲಿ ಆಗಾಗ ವಿಹರಿಸುತ್ತಿದ್ದರು. ತನ್ನ

ತೋಟದ ಹೂಗಿಡಗಳು ಹಾಳಾಗುತ್ತಿರುವುದನ್ನು ಕಂಡ ಅನಂತಾರ್ಯ ಒಂದು ರಾತ್ರಿ ಕಾವಲು ಕುಳಿತ ಈ ದಂಪತಿಗಳನ್ನು ನೋಡಿ ಹಿಡಿಯಲು ಪ್ರಯತ್ನಿಸಿದ. ಸ್ವಾಮಿ ಅವನ ಕೈಗೆ ಸಿಗದೆ ತಪ್ಪಿಸಿಕೊಂಡು ಓಡಿದ, ಓಡಲಾರದ ಲಕ್ಷ್ಮಿ ಸಿಕ್ಕಿ ಬಿದ್ದಳು. ಸಂಪಿಗೆ ಮರಕ್ಕೆ ಅವಳನ್ನು ಕಟ್ಟಿಹಾಕಿದ ಅನಂತಾರ್ಯನಿಗೆ ಮಾರನೆಯದಿನ ಆಲಯಕ್ಕೆ ಹೋದಾಗಲೇ ಆಕೆ ಯಾರು ಎಂಬುದು ತಿಳಿದದ್ದು. ಪಾಹಿಮಾಂ ಎಂದು ರಕ್ಷಮಾಂ ಎಂದು ಕೇಳಿಕೊಂಡು ಆಕೆಯನ್ನು ಗೌರವದಿಂದ ಆಲಯಕ್ಕೆ ಕರೆದುಕೊಂಡು ಬಂದ. ಈ ಪ್ರಸಂಗವನ್ನು ಕೇಳಿ ತಿಳಿದ ರಾಮಾನುಜಾಚಾರ್ಯರು ಬ್ರಹ್ಮೋತ್ಸವದ 7 ನೇ ದಿನಗಳಲ್ಲಿ ಸ್ವಾಮಿಯ ಮೆರವಣಿಗೆಯನ್ನು ಊರಿನಲ್ಲೆಲ್ಲ ತೆಗೆದುಕೊಂಡು ಹೋಗಬೇಕೆಂದೂ, 8ನೇ ದಿನದಂದು ಅನಂತಾರ್ಯನಿಗೆ ಆಲಯದ ವತಿಯಿಂದ ಒಂದು ಮಾಲೆಯನ್ನು ಪ್ರಸಾದ ರೂಪವಾಗಿ ನೀಡಬೇಕೆಂದೂ ವಿಧಿಸಿದರು. ಈಗಲೂ ಈ ಪದ್ಧತಿಯು ಜಾರಿಯಲ್ಲಿದೆ.

**ತಮಿಳು ಪ್ರಬಂಧಗಳು :**

ಆಲಯದಲ್ಲಿ ತಮಿಳು ಪಾಶುರಗಳನ್ನು ಹೇಳುವುದು ಮತ್ತೊಂದು ವಿಶಿಷ್ಟವಾದ ಪದ್ಧತಿಯಾಗಿದೆ. ತಮಿಳು ಪ್ರಬಂಧಗಳನ್ನೂ ವೇದಗಳನ್ನೂ ಅಧ್ಯಯನೋತ್ಸವದಲ್ಲಿಯೇ ಅಲ್ಲದೆ ಇತರ ಸಂದರ್ಭಗಳಲ್ಲಿಯೂ ಹಾಡಲಾಗುತ್ತದೆ. ಉದಾಹರಣೆಗೆ ಶುಕ್ರವಾರಗಳಲ್ಲಿ ಸ್ವಾಮಿಗೆ ತಿರುಮಂಜನವಾದಾಗ ಪದ್ಮಾವತೀ ವಿಗ್ರಹವಿರುವ ಪದಕವನ್ನು ತೆಗೆಯುವ ಸಂದರ್ಭದಲ್ಲಿ ಆಂಡಾಳ್ ಹಾಡಿದ ತಮಿಳು ಪಾಶುರಗಳನ್ನು ಹೇಳುವರು. ತಮಿಳು ಪಾಶುರಗಳನ್ನು ಹಾಡುವ ಪದ್ಧತಿಯನ್ನು ರಾಮಾನುಜರು ಪ್ರವೇಶಗೊಳಿಸಿದರೆಂದು ತಿಳಿದುಬರುವುದು. ರಾಮಾನುಜಾಚಾರ್ಯರು ತಿರುಮಲೆಯಲ್ಲಿ ಅಧ್ಯಯನೋತ್ಸವವನ್ನು ಪ್ರವೇಶಗೊಳಿಸಿದರೆಂದು ವೆಂಕಟಾಚಲೇತಿಹಾಸ ಮಾಲೆಯು ಹೇಳುತ್ತದೆ. ಇಲ್ಲಿ ಮೊದಲಿಗೆ ಪೆರಿಯಾಳ್ವಾರ ಪಾಶುರಗಳನ್ನು ಹೇಳುತ್ತ ನಂತರದಲ್ಲಿ ಆಳ್ವಾರರ ಪಾಶುರಗಳನ್ನು ಪಠಿಸಲಾಗುವುದು. ಈ ಅಧ್ಯಯನೋತ್ಸವವು ಇಂದಿಗೂ ಸಹ ಉತ್ಸಾಹದಿಂದ ನಡೆಯುತ್ತಿರುವುದನ್ನು ತಿರುಮಲೆಯಲ್ಲಿ ನೋಡಬಹುದಾಗಿದೆ.

★★★★★

---





## ಯಾತ್ರಿಕ ಭಕ್ತರಲ್ಲಿ.....

## ವಿನಂತಿ

**"ಡಯಲ್ - ಯುವರ್ ಇ.ಓ."**

ತಿರುಮಲೆಯಲ್ಲಿ ತಮ್ಮ ಅನುಭವಕ್ಕೆ ಬಂದ ಕುಂದು ಕೊರತೆಗಳ ಬಗ್ಗೆ ಹೆಚ್ಚು - ಕಡಿಮೆಗಳ ಬಗ್ಗೆ - ಸಲಹೆ ಸೂಚನೆಗಳನ್ನು ಕಾರ್ಯನಿರ್ವಹಣಾಧಿಕಾರಿಯವರಿಗೆ ನೇರವಾಗಿ ನೀಡಬಹುದು. ಅದಕ್ಕಾಗಿ ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00 ಗಂಟೆಯವರೆಗೆ ತಾವು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳೊಡನೆ ದೂರವಾಣಿಯಲ್ಲಿ ಮಾತನಾಡಬಹುದು.

*ದೂರವಾಣಿ ಸಂಖ್ಯೆ - 08574-77261.*

ಯಾತ್ರಿಕರ ಸೌಕರ್ಯಗಳನ್ನು ಹೆಚ್ಚಿಸಲು
ತಮ್ಮ ಸುಲಭತರ ಯಾತ್ರೆ ಕೈಗೂಡಲು
ದಯವಿಟ್ಟು ಮಾತನಾಡಿ.



# ಯಶಸ್ವಿ ಬ್ರಹ್ಮೋತ್ಸವ



ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ 19-9-2001 ರಿಂದ 28-9-2001 ರ ವರೆಗೆ ವಾರ್ಷಿಕ ಬ್ರಹ್ಮೋತ್ಸವವು ಯಶಸ್ವಿಯಾಗಿ ನಡೆಯಿತು. ಅಂಕರಾರ್ಪಣದಿಂದ ಚಕ್ರಸ್ನಾನದ ವರೆಗಿನ ಹತ್ತು ದಿನಗಳಲ್ಲಿ ತಿರುಮಲೆಯಲ್ಲಿ ಒಂದೇ ಸಮ ಜನಸಂದಣಿ, ಒಂದೇ ಸಮ ಸಂಭ್ರಮ, ಒಂದೇ ಸಮ ಉತ್ಸಾಹ.

20 ನೇ ತಾರೀಖು ಧ್ವಜಾರೋಹಣ. ಅದರ ಹಿಂದಿನ ದಿನ 19-9-2001 ರಂದು ಸಂಜೆ ಸ್ವಾಮಿಯ ಸೇನಾಪತಿ ವಿಷ್ವಕ್ಸೇನರು ಊರ ಮೆರವಣಿಗೆಯಲ್ಲಿ ಬಂದು ವಸಂತ ಮಂಟಪದ ಬಳಿಯ ಹುತ್ತದ ಮಣ್ಣನ್ನು ಬ್ರಹ್ಮೋತ್ಸವದ ಅಂಕುರಾರ್ಪಣೆಗೆ ಸಂಗ್ರಹಿಸಿದರು. ದಿಗ್ದೇವತೆಗಳನ್ನೂ ಬ್ರಹ್ಮೋತ್ಸವಕ್ಕೆ ಆಹ್ವಾನಿಸಿದರು. ಆಲಯದ ಒಳಗೆ ಯಜ್ಞಶಾಲೆಯಲ್ಲಿ ಅಂಕುರಾರ್ಪಣೆ ಮಾಡಲಾಯಿತು.

ಮಾರನೆಯ ದಿನ ವಿಧಿಯುಕ್ತವಾಗಿ ಶಾಸ್ತ್ರೋಕ್ತವಾಗಿ ಗರುಡ ಧ್ವಜವನ್ನು ಧ್ವಜಸ್ತಂಭದ ಮೇಲೆ ಏರಿಸಲಾಯಿತು. ಧ್ವಜಾರೋಹಣ ದಿಂದಲೇ ಬ್ರಹ್ಮೋತ್ಸವಾರಂಭ ಎಂಬ ನಂಬಿಕೆಯುಂಟು. ಆನಂತರ ಸ್ವಾಮಿ, ಶ್ರೀದೇವಿ ಭೂದೇವಿಯರೊಡನೆ ನಗರ ಬೀದಿಗಳಲ್ಲಿ - ತೇರುಬೀದಿಗಳಲ್ಲಿ - ಮಾಡ ವೀಧಿಗಳಲ್ಲಿ ಏಳು ಹೆಡೆಗಳ ಶೇಷವಾಹನದಲ್ಲಿ ಅಪಾರ ಜನಸಂದಣಿ ಆನಂದದಿಂದ ಆಗಮನಗೀತೆಯ ಘೋಷ ಮಾಡುತ್ತಿರುವಂತೆ ಎಲ್ಲರನ್ನೂ ಅನುಗ್ರಹ ಮಾಡುತ್ತ ಮೆರವಣಿಗೆಯಲ್ಲಿ ಬಂದರು.

21 ರಂದು ಶುಕ್ರವಾರ ಬೆಳಗ್ಗೆ ಸ್ವಾಮಿ ಐದು ಹೆಡೆಗಳ ಚಿಕ್ಕಶೇಷವಾಹನದಲ್ಲಿ ದರ್ಶನ ನೀಡಿದರೆ ಅಂದು ಸಂಜೆ ಪರಮಹಂಸ ರೂಪಿಯಾಗಿ ವೀಣಾಪಾಣಿಯಾಗಿ ಹಂಸವಾಹನದಲ್ಲಿ ಕಂಡುಬಂದು ಕೃಪೆಯ ವರ್ಷ ಹರಿಸಿದರು.

22 ರಂದು ಶನಿವಾರ ಸಿಂಹವಾಹನ, ಮುತ್ತಿನ ಚಪ್ಪರ ವಾಹನಗಳು ನಡೆದವು. 23 ರಂದು ಕಲ್ಪವೃಕ್ಷವಾಹನ ಹಾಗೂ ಸರ್ವಭೂಪಾಲ ವಾಹನಗಳು ನಡೆದವು. ಬ್ರಹ್ಮೋತ್ಸವದ ದಿನಗಳಲ್ಲಿ ಜನಸಂದಣಿ ದಿನದಿಂದ ದಿನಕ್ಕೆ ಅಧಿಕ ವಾಗುತ್ತ ನಡೆದಿದ್ದು 23 ರಂದು ಭಾನುವಾರ ಅರ್ಧಲಕ್ಷವನ್ನು ದಾಟಿದ್ದಿತು. 24 ರಂದು ಎರಡು ಲಕ್ಷವನ್ನು ಮುಟ್ಟುವ ಮುನ್ಸೂಚನೆ ಯಾಗಿದ್ದಿತು.

24 ರಂದು ಬೆಳಗ್ಗೆ ಸ್ವಾಮಿ ಮೋಹಿನೀ ಅವತಾರದಲ್ಲಿ ಪಲ್ಲಕ್ಕಿಯಲ್ಲಿ ಹೊರಬಂದರು

## ವಾರ್ತಾಲಹರಿ

ಅಂದು ಸಂಜೆ ಗರುಡೋತ್ಸವ. ಮೂಲವರಿಗೆ ತೊಡಿಸುವ ಲಕ್ಷ್ಮಿಹಾರ, ಸಹಸ್ರನಾಮಹಾರ, ಮಕರಕಂಠಿ ಮೊದಲಾದ ಅಮೂಲ್ಯವಾದ ಆಭರಣಗಳನ್ನು ಉತ್ಸವರಿಗೆ ಅಲಂಕರಿಸಿ ಗರುಡವಾಹನದಲ್ಲಿ ಆಸೀನಗೊಳಿಸಿ ಊರಮೆರವಣಿಗೆಯಲ್ಲಿ ಕರೆತರುವುದು ಸಂಪ್ರದಾಯ. ಇಲ್ಲಿಗೆ ಆಂಧ್ರಪ್ರದೇಶದ ಸರ್ಕಾರದ ವತಿಯಿಂದ ರೇಷ್ಮೆ ವಸ್ತ್ರದ ಉಡುಗೊರೆಯನ್ನು ಮುಖ್ಯಮಂತ್ರಿ ಶ್ರೀ ನಾರಾ ಚಂದ್ರಬಾಬು ನಾಯುಡು ಅವರು ತಲೆಯ ಮೇಲಿಟ್ಟುಕೊಂಡು ಬಂದು ಸಮರ್ಪಿಸಿದರು. ಮದರಾಸಿನಿಂದ ಬರುವ ಬೆಳುಗೊಡೆಗಳು ಉತ್ಸವದ ಹೊತ್ತಿಗೆ ಸರಿಯಾಗಿ ಸ್ವಾಮಿ ಸೇವೆಯಲ್ಲಿ ಸಲ್ಲುತ್ತವೆ. ಈ ಎಲ್ಲ ಕಾರಣಗಳಿಂದಾಗಿ ಅಂದಿನ ಜನಸಂದಣಿ ಉಕ್ಕಿ ಹರಿಯುವುದು ಸ್ವಾಭಾವಿಕ.

25-9-2001 ರಂದು ಬೆಳಗ್ಗೆ ಹನುಮಂತ ವಾಹನದಲ್ಲಿ ಸ್ವಾಮಿ ಮೆರವಣಿಗೆಯಲ್ಲಿ ಬಂದರೆ ಅಂದು ಮಧ್ಯಾಹ್ನ ಸುವರ್ಣರಥ. ರಥರಂಗ ಡೋಲೋತ್ಸವದಲ್ಲಿ ಉಭಯ ನಾಯಕಿಯ ರೊಡನೆ ಸ್ವಾಮಿ ರಥಬೀದಿಗಳಲ್ಲಿ ಹೊರ ಬಂದಾಗಲೂ ಗರುಡೋತ್ಸವದಲ್ಲಿದ್ದಂತೆ ಜನ ಅತಿ ಸಾಂದ್ರವಾಗಿ ಅತಿ ಭಕ್ತಿಯಿಂದ ಸ್ವಾಮಿಯನ್ನು ಸ್ವಾಗತಿಸಿದರು. ಅಂದು ರಾತ್ರಿ ಗಜವಾಹನವೂ ಅದೇ ವೈಭವ, ಉತ್ಸಾಹಗಳಿಂದ ನಡೆಯಿತು.

26-9-2001 ರಂದು ಸೂರ್ಯಪ್ರಭ ಚಂದ್ರ ಪ್ರಭವಾಹನಗಳು ನಡೆದವು. ಸ್ವಾಮಿಯು ಸೂರ್ಯ ಪ್ರಭವಾಹನದಲ್ಲಿ ಹೊರಟಾಗ ಅಪಾರಜನ ಆನಂದಿಂದ ಸ್ವಾಮಿಯ ದಿವ್ಯ ಸೌಂದರ್ಯವನ್ನು ನೋಡಿ ತೃಪ್ತರಾದರು. ಚಂದ್ರಪ್ರಭವಾಹನ ಅಂದು ಸಂಜೆ ಆಕರ್ಷಕವಾಗಿದ್ದಿತು.

27-9-2001 ರಂದು ಬೆಳಗ್ಗೆ ರಥೋತ್ಸವ. ಚಿನ್ನದ ರಥ ಹಿಂದೆ ಆಗಿದ್ದರೂ ಇಲ್ಲಿನ ರಥಕ್ಕೆ ಇನ್ನೊಂದು ರೀತಿಯ ಆದ್ಯತೆ. "ರಥಸ್ಥಂ ಕೇಶವಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ" ಎಂದರು. ರಥಸ್ಥನಾದ ಸ್ವಾಮಿಯನ್ನು ನೋಡಲು ಅಪಾರವಾದ ಜನ. ಇಂದೂ ಸಹ ಸೇರಿದ್ದಿತು. ಅಂದು ಸಂಜೆ ಅಶ್ವವಾಹನದಲ್ಲಿ ಸ್ವಾಮಿ ಹೊರ ಬಂದು ತಾನೇ ಕಲ್ಕಿ ಅವತಾವೆಂದು ಪ್ರಕಟಪಡಿಸಿದರು.

28-9-2001 ರಂದು ಚಕ್ರಸ್ನಾನ. ಬ್ರಹ್ಮೋತ್ಸವದ ಕಡೆಯ ದಿನ. ಸ್ವಾಮಿಯ ಜನ್ಮನಕ್ಷತ್ರವಾದ ಶ್ರವಣನಕ್ಷತ್ರದಲ್ಲಿ ಸ್ವಾಮಿ ಪುಷ್ಕರಿಣಿಯಲ್ಲಿ ಚಕ್ರಸ್ನಾನ ಸಂಪನ್ನವಾಯಿತು. ಅನಂತ ಜನ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ಪವಿತ್ರಗಾತ್ರರಾದರು.

ಈ ಬಾರಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ನಾರಾ ಚಂದ್ರಬಾಬು ನಾಯುಡು ಅವರು ಸ್ವಾಮಿಯ ಬ್ರಹ್ಮೋತ್ಸವದ ಗರುಡೋತ್ಸವ

ಕಾಲಕ್ಕೆ ತಿರುಮಲೆಗೆ ಆಗಮಿಸಿ ಸರ್ಕಾರದ ಪರವಾಗಿ ರೇಷ್ಮೆ ವಸ್ತ್ರಗಳನ್ನು ನೀಡಿದಾಗ ನಡೆದ ಕಾರ್ಯಕ್ರಮಗಳು ಹಲವಾರು. ಅವುಗಳಲ್ಲಿ ಬಹುತೇಕ ಕಾರ್ಯಕ್ರಮಗಳು, ಯೋಜನೆಗಳು, ತಿ. ತಿ. ದೇವಸ್ಥಾನಗಳಿಗೆ ಸಂಬಂಧ ಪಟ್ಟವುಗಳೇ ಆಗಿದ್ದವು ಎಂಬುದು ಗಮನಾರ್ಹ.

ಮುಖ್ಯಮಂತ್ರಿಗಳು ತಿರುಪತಿಯಲ್ಲಿ ಬಂದಿಳಿದ ಕೂಡಲೇ ಆರಂಭವಾದ ಈ ಕಾರ್ಯಕ್ರಮಗಳು ಮಂಗಳವಾರ ಅವರು ತಿರುಮಲೆಯನ್ನು ಬಿಟ್ಟು ಹೊರಡುವವರೆಗೆ ನಡೆದವು. ತಿರುಪತಿಯಲ್ಲಿ ಮೊದಲಿಗೆ ರೂಯಾ ಆಸ್ಪತ್ರೆಯಲ್ಲಿನ ರೋಗಿಗಳಿಗೆ ಉಚಿತ ಆಹಾರ ನೀಡುವ ಅನ್ನದಾನ ಯೋಜನೆಯನ್ನು ಉದ್ಘಾಟಿಸಿದ ಮುಖ್ಯಮಂತ್ರಿಗಳು ರೂಯಾ ಆಸ್ಪತ್ರೆಯ ಆವರಣದಲ್ಲಿ ಹೊಸದಾಗಿ ನಿರ್ಮಿಸಲು ಆಯೋಜಿಸಲಾಗಿರುವ ಹೆರಿಗೆ ಆಸ್ಪತ್ರೆ ಕಟ್ಟಡಕ್ಕೆ ಶಿಲಾನ್ಯಾಸ ಮಾಡಿದರು. ಶ್ರೀ ವೆಂಕಟೇಶ್ವರ ವೈದ್ಯ ವಿಜ್ಞಾನ ಸಂಸ್ಥೆಯಲ್ಲಿ ಆಯೋಜಿಸಲಾಗಿರುವ 'ವಾರ್ಷಿಕ ನೂರು ಉಚಿತ ಹೃದಯ ಶಸ್ತ್ರಚಿಕಿತ್ಸೆಗಳ' ಪ್ರಾಣದಾನ ಯೋಜನೆಯ ಉದ್ಘಾಟನೆ ನಡೆಸಿಕೊಟ್ಟರು. ಎಸ್. ವಿ. ಹೈಸ್ಕೂಲು ಆವರಣದಲ್ಲಿ ನಿರ್ಮಿಸಲಾಗುವ ಆಟೋಟ ಸಮುದಾಯ ಭವನದ ಶಿಲಾನ್ಯಾಸ ಮಾಡಿ ತಿರುಪತಿಯ ಮೃಗಾಲಯದ ವರೆಗಿನ ಕಲ್ಯಾಣಿ ಡ್ಯಾಂ ಎರಡನೇ ಪೈಪ್ ಲೈನ್ ಕೆಲಸಗಳನ್ನು ಉದ್ಘಾಟಿಸಿದರು. ತಿರುಪತಿಯ ರಾಮಾನುಜ ವೃತ್ತದ ರೈಲ್ವೆ ಸೇತುವೆಯನ್ನು ಅಗಲಗೊಳಿಸುವ ಹಾಗೂ ರೇಣಿಗುಂಟ ತಿರುಪತಿ ಮಾರ್ಗವನ್ನು ಅಗಲಗೊಳಿಸುವ ಕಾರ್ಯಗಳಿಗೆ ಶಿಲಾನ್ಯಾಸ ಮಾಡಿದರು. ತಿರುಪತಿಯ ಎಸ್.ವಿ. ಲೈಬ್ರರಿ ಆವರಣದಲ್ಲಿ ತಿ.ತಿ.ದೇ. ಸಿಬ್ಬಂದಿ ತರಬೇತಿ ಅಕಾಡಮಿಯ ಆರಂಭೋತ್ಸವವನ್ನು ನೆರವೇರಿಸಿಕೊಟ್ಟರು.

ತಿರುಮಲೆಯಲ್ಲಿಯೂ ಇದೇ ರೀತಿಯ ಹಲವು ಕಾರ್ಯಕ್ರಮಗಳು ನಡೆದವು. ಪದ್ಮಾವತೀ ಅತಿಥಿಗೃಹ ಪ್ರಾಂತದಲ್ಲಿ 360 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿತವಾಗಿರುವ ತಿ.ತಿ.ದೇ. ಧರ್ಮದರ್ಶಿಗಳ ಸಮಾವೇಶದ ಅನ್ನಮಯ್ಯ ಭವನವನ್ನು ಉದ್ಘಾಟಿಸಿದರು. ಇಲ್ಲಿ ಧರ್ಮದರ್ಶಿಗಳು ಇರಲು ಇಪ್ಪತ್ತೊಂದು ಕೊಠಡಿಗಳುಂಟು. ಇದಕ್ಕಾಗಿ 21 ಮಂದಿ ದಾತರು ತಲಾ ಹತ್ತು ಲಕ್ಷ ರೂಪಾಯಿ ದಾನಗಳನ್ನು ನೀಡಿದ್ದಾರೆ.

ತಿರುಮಲೆಯಲ್ಲಿ ಎರಡು ಕೋಟಿ ರೂಪಾಯಿ ವೆಚ್ಚದಲ್ಲಿ ನಿರ್ಮಿಸಲಾಗುವ ಮೂರನೆಯ ಯಾತ್ರಿಕ ಸಮುದಾಯ ವಿಶ್ರಾಂತಿ ಭವನಕ್ಕೆ ಶಿಲಾನ್ಯಾಸ ಮಾಡಿದರು. ಈ ಸಂಬಂಧದಲ್ಲಿ ರಿಲಯನ್ಸ್ ಸಂಸ್ಥೆ ಒಂದು ಕೋಟಿ ರೂಗಳ ದಾನ ನೀಡಿದೆ.

ತಿರುಮಲೆಯ ಮ್ಯೂಜಿಯಂ ಬಳಿಯಲ್ಲಿನ ಶ್ರೀದೇವಿ ಕ್ಯಾಂಟೀನ್ ಹಾಗೂ ರಾಮಬಗೀಚಾ ಅತಿಥಿ ಗೃಹಗಳ ಬಳಿಯ ಭೂದೇವಿ ಕ್ಯಾಟೀನ್‌ಗಳ ಉದ್ಘಾಟನೆ ನಡೆಸಿಕೊಟ್ಟರು. ಈ ಎರಡು ಕ್ಯಾಂಟೀನ್ ಭವನಗಳು 1.5 ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣವಾಗಿವೆ.

ತಿರುಮಲೆಯಲ್ಲಿ ಮಹೇಂದ್ರ ಮತ್ತು ಕಂಪನಿಯವರು ನಿರ್ಮಾಣಮಾಡಿ ಕಾರ್ಯನಿರ್ವಹಿಸಿ ಒಪ್ಪಿಸುವಂತಹ ವೇಸ್ಟ್ ಮ್ಯಾನೇಜ್‌ಮೆಂಟ್ ಪ್ಲಾಂಟ್‌ಗೆ ಶಿಲಾನ್ಯಾಸವನ್ನು ಮುಖ್ಯಮಂತ್ರಿಯವರು ಮಾಡಿಕೊಟ್ಟರು.

ಅದರಂತೆಯೇ ಅನ್ನದಾನಂ ಸಮುದಾಯ ಭವನದಲ್ಲಿ ಸೌರಶಕ್ತಿಯನ್ನು ಅಡಿಗೆಯ ಕೆಲಸಕ್ಕೆ ಬಳಸುವಂತಹ ಒಂದು ಕೋಟಿ ಇಪ್ಪತ್ತು ಲಕ್ಷ ರೂಪಾಯಿಗಳ ಸೌರಶಕ್ತಿ ಅಡಿಗೆ ತಾಣನಿರ್ಮಾಣಕ್ಕೆ ಶಿಲಾನ್ಯಾಸ ನೆರವೇರಿಸಿ ಕೊಟ್ಟರು.

ಸೋಮವಾರ ಸಂಜೆ ಸ್ವಾಮಿಯ ಗರುಡೋತ್ಸವದ ಹೊತ್ತಿಗೆ ರೇಷ್ಮೆ ವಸ್ತ್ರಗಳನ್ನು ತಲೆಯ ಮೇಲೆ ಹೊತ್ತು ತಂದ ಮುಖ್ಯಮಂತ್ರಿಗಳು ತಮ್ಮ ಕುಟುಂಬ ಸಮೇತರಾಗಿ ಸ್ವಾಮಿಯನ್ನು ದರ್ಶನ ಮಾಡಿದ ಮೇಲೆ ಅವರಿಗೆ ರಂಗನಾಯಕ ಮಂಟಪದಲ್ಲಿ ಸ್ವಾಮಿಯ ಶೇಷವಸ್ತ್ರವನ್ನು ಬಹೂಕರಿಸಿ ಸನ್ಮಾನಿಸಲಾಯಿತು. ತಿ.ತಿ.ದೇ.ಗಳ ವತಿಯಿಂದ ಸ್ವಾಮಿ ಪ್ರಸಾದಗಳನ್ನು ನೀಡಲಾಯಿತು.

ಆಲಯದಲ್ಲಿದ್ದ ಮುಖ್ಯಮಂತ್ರಿಗಳು 2002 ನೇ ಇಸವಿಯ ಹನ್ನೆರಡು ಹಾಳೆಗಳ ವರ್ಣಚಿತ್ರಗಳ ಕ್ಯಾಲೆಂಡರ್ ಅನ್ನು ಬಿಡುಗಡೆ ಮಾಡಿದರು.

ಮುಖ್ಯಮಂತ್ರಿ ಶ್ರೀ ನಾರಾ ಚಂದ್ರಬಾಬು ನಾಯುಡು ಅವರು ಪತ್ನೀಸಹಿತರಾಗಿ ಮಂಗಳವಾರವೂ ಸ್ವಾಮಿ ದರ್ಶನ ಪಡೆದರು. ಅವರೊಂದಿಗೆ ಮುಜರಾಯಿ ಇಲಾಖಾಮಂತ್ರಿ ಶ್ರೀ ದಂಡು ಶಿವರಾಮರಾಜು, ವಾರ್ತಾಸಚಿವ ಡಾ|| ಶಿವಪ್ರಸಾದ್, ಎಂ.ಎಲ್.ಎ. ಶ್ರೀ ಚದಲವಾಡ ಕೃಷ್ಣಮೂರ್ತಿ ತಿ.ತಿ.ದೇ. ವಿಶೇಷ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಎ.ವಿ.ಎಸ್. ರೆಡ್ಡಿ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಡಾ|| ಪಿ. ಕೃಷ್ಣಯ್ಯ, ಸಂಯುಕ್ತ ಕಾರ್ಯ ನಿರ್ವಹಣಾಧಿಕಾರಿಗಳಾದ ಶ್ರೀ ಬಾಲ ಸುಬ್ರಹ್ಮಣ್ಯಂ, ಶ್ರೀ ನಾರಾಯಣ ಮೊದಲಾದವರಿದ್ದರು.

ಈ ಬಾರಿಯ ಬ್ರಹ್ಮೋತ್ಸವದ ವೈಶಿಷ್ಟ್ಯಗಳಲ್ಲಿ ಹಲವನ್ನು ಗುರುತಿಸುವುದಾಗಬೇಕು ಎಂದರೆ ಮೊದಲನೆಯದಾಗಿ ಉಲ್ಲೇಖನೀಯವಾಗುವುದು ಸ್ವಾಮಿಯ ನಿತ್ಯಾಲಂಕಾರಕ್ಕೆ ಒದಗಿಬಂದ ಪುಷ್ಪದಾನ. ಆಲಯದ ನಿತ್ಯಪೂಜೆ ಉತ್ಸವಗಳಿಗೆ ತಕ್ಕ ಹೂಗಳನ್ನು ಬೆಳೆಯುವ ಒಂದು ವಿಭಾಗವೇ ಇದ್ದರೂ ಹೂಗಳ ಇಳಿತ ಬೇಡಿಕೆಯ ಅನುಗುಣವಾಗಿಲ್ಲ. ಆದರೆ ಈ ಕೊರತೆಯನ್ನು ತುಂಬಲು ಹೂ ದಾನದ ಮಾತು ಹೊರಟದ್ದೇ ತಡ ನಾ ಮುಂದು ತಾ ಮುಂದು ಎಂದು ಹೂಗಳು ಬಂದು ಸೇರಿದವು. ಒಟ್ಟು 14000 ಕಿಲೋ ಹೂವುಗಳ ದಾನ ಸಂಗ್ರಹವಾಯಿತು ಎಂದು ಉದ್ಯಾನವನಾಧಿಕಾರಿ ಡಾ|| ಪಿ. ಟಿ. ಶ್ರೀನಿವಾಸ್ ಅವರು ತಿಳಿಸಿದ್ದಾರೆ.

ದೇವರ ಬ್ರಹ್ಮೋತ್ಸವಕ್ಕೆ ಬರುವವರಿಗಾಗಿ ವಿವಿಧ ಪ್ರದೇಶಗಳಿಂದ ನೇರವಾಗಿ ತಿರುಮಲೆಗೆ 147 ಬಸ್‌ಗಳು ಏರ್ಪಾಡಾಗಿದ್ದರೆ ತಿರುಪತಿ ತಿರುಮಲೆಗಳ ನಡುವೆ ಸಾಧಾರಣವಾಗಿ ಓಡಾಡುವ 80 ಬಸ್‌ಗಳ ಜೊತೆಗೆ ಈ ಬಾರಿ ಐವತ್ತು ಹೊಸವು ಸೇರಿಸಲ್ಪಟ್ಟವು. ಬೆಟ್ಟದ ಎರಡೂ ಹಾದಿಗಳನ್ನು 24 ಗಂಟೆ ಸಾರಿಗೆಗಾಗಿ ತೆರೆದಿಡಲಾಗಿದ್ದು ಸುಮಾರು ಐವತ್ತು ಮಂದಿ

ಹಿರಿಯ ಡ್ರೈವರ್‌ಗಳು ಆಯಕಟ್ಟಿನ ಸ್ಥಳಗಳಲ್ಲಿ ಬಸ್‌ಗಳ ಗತಿ ಗಮನಗಳ ಉಸ್ತುವಾರಿಯಲ್ಲಿ ತೊಡಗಿದ್ದರು.

ತಿರುಪತಿಯ ಮಹತಿ ರಂಗಮಂದಿರ, ಅನ್ನಮಾಚಾರ್ಯ ಕಲಾಮಂದಿರ ತಿರುಮಲೆಯ ಆಸ್ಥಾನ ಮಂಟಪಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ತಿರುಮಲೆಯ ಆಸ್ಥಾನ ಮಂಟಪದಲ್ಲಿ ಬೆಳಗ್ಗೆ ಸುಪ್ರಭಾತ, ಗೀತಾಪಠಣ, ವಿಷ್ಣುಸಹಸ್ರನಾಮ ಪಾರಾಯಣ, ಧಾರ್ಮಿಕೋಪನ್ಯಾಸ, ಮಹಾತ್ಮರ ಸಂದೇಶ, ಮೊದಲಾಗಿ ಸಂಗೀತ ಹರಿಕಥೆಗಳು ರಾತ್ರಿ ಹನ್ನೊಂದರ ವರೆಗೆ ನಿರಂತರವಾಗಿ ನಡೆಯುವಂತಿದ್ದಿತು. ಕಾರ್ಯಕ್ರಮಗಳಲ್ಲಿ ಸರ್ವಶ್ರೀ ಕೆ.ಜಿ. ಪವಮಾನಾಚಾರ್ಯ ಸತ್ಯನಾಥಾಚಾರ್ಯ, ಡಾ|| ಜಿ. ವಿ. ಸುಬ್ರಹ್ಮಣ್ಯಂ, ಚಿತ್ರಕೂಟದ ರಾಮಭದ್ರಾಚಾರ್ಯಜೀ ತಿರುಪತಿಯ ಡಾ|| ವರದರಾಜನ್ ಮೊದಲಾದ ಹಿರಿಯರು ಹಲವು ಹನ್ನೊಂದು ವಿಷಯಗಳ ಬಗ್ಗೆ ಉಪನ್ಯಾಸಗಳನ್ನು ನೀಡಿದರು. ತಿ. ತಿ. ದೇ.ಗಳ ದಾಸಸಾಹಿತ್ಯ ವಿಭಾಗ, ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್, ಧರ್ಮಪ್ರಚಾರ ಪರಿಷತ್ ಮೊದಲಾದ ವಿಭಾಗಗಳು ಭಾಗವಹಿಸಿದ್ದವು. ಅನ್ನಮಾಚಾರ್ಯ ಪ್ರಾಜೆಕ್ಟ್ ಸಂಗೀತ ನೃತ್ಯ ಕಲಾಶಾಲೆ ಮೊದಲಾದ ಲಲಿತಕಲಾ ವಿಭಾಗಗಳಿಂದ ಸಂಗೀತ ಹರಿಕಥೆಗಳು ಏರ್ಪಾಡಾಗಿದ್ದವು.

ಧರ್ಮ ಪ್ರಚಾರ ಪರಿಷತ್ ವತಿಯಿಂದ ಉಚಿತವಾಗಿ ಪುಸ್ತಕ ವಿತರಣೆ ನಡೆಯಿತು. ಲಲಿತಾ ಸಹಸ್ರನಾಮ, ಗೋವಿಂದ ನಾಮಾವಳಿ, ಧ್ಯಾನಶ್ಲೋಕಗಳು, ಶಿವಮಹಿಮ ಸ್ತೋತ್ರ, ಶ್ರೀ ವೆಂಕಟೇಶ್ವರ ಸಹಸ್ರನಾಮ ಮೊದಲಾದ ಕಿರು ಪುಸ್ತಕಗಳ ವಿತರಣೆ ಯಶಸ್ವಿಯಾಗಿದ್ದಿತು. ಧರ್ಮ ಪ್ರಚಾರ ಪರಿಷತ್ ಕಾರ್ಯದರ್ಶಿ ಡಾ|| ಎಚ್.ಎಸ್. ಬ್ರಹ್ಮಾನಂದ ಅವರು ಬರೆದ ''ಶ್ರೀನಿವಾಸುನಿ ದಿವ್ಯ ವೈಭವಮು'' ಪುಸ್ತಕದ ಒಂದು ಲಕ್ಷ ಪ್ರತಿಗಳನ್ನು ಉಚಿತವಾಗಿ ವಿತರಣೆ ಮಾಡಲಾಯಿತು. ಬ್ರಹ್ಮೋತ್ಸವದ ವಿಧಾನವನ್ನು ವಿವರಿಸುವುದೇ ಅಲ್ಲದೆ ಈ ಹದಿನಾರು ಪುಟಗಳ ಪುಟ್ಟ ಪುಸ್ತಕ ಸ್ವಾಮಿಯ ವಿಭವಲೀಲೆಯನ್ನೂ ಒಳಗೊಂಡಿದೆ.

ವಾರ್ಷಿಕವಾಗಿ ತಿ.ತಿ.ದೇ. ತಯಾರಿಸಿ ಮಾರಾಟ ಮಾಡುವ ತಿ.ತಿ.ದೇ. 2001 ರ ಕ್ಯಾಲೆಂಡರ್ ಅನ್ನು ಬ್ರಹ್ಮೋತ್ಸವದ ಮೊದಲಲ್ಲಿಯೇ ಬಿಡುಗಡೆ ಮಾಡಲಾಯಿತು. ತಿ.ತಿ.ದೇ. ಧಾರ್ಮಿಕ ಪುಸ್ತಕಗಳ ಅಂಗಡಿಗಳು ಎಂದಿನಂತೆ ಪ್ರದರ್ಶನ - ಮಾರಾಟವನ್ನು ಕೈಗೊಂಡಿದ್ದವು. ಇಲ್ಲಿ ಶೇ 10 ಹಾಗೂ ಶೇ 25 ರಷ್ಟು ರಿಯಾಯಿತಿಯ ಅವಕಾಶವೂ ಇದ್ದಿತು. ತಿರುಮಲೆಯ ಆರ್ಜಿತಂ ಕಚೇರಿ, ಕಲ್ಯಾಣಕಟ್ಟೆಗಳ ಬಳಿ ಹಾಗೂ ತಿರುಪತಿಯ ಬಸ್ ನಿಲ್ದಾಣಗಳಲ್ಲಿ ಈ ಪುಸ್ತಕ ಪ್ರದರ್ಶನ ಮಾರಾಟಗಳು ಏರ್ಪಾಡಾಗಿದ್ದವು. ಇವುಗಳಲ್ಲಿ ಹತ್ತು ದಿನಗಳಲ್ಲಿ ಒಟ್ಟು 1,79,083 ರೂಪಾಯಿಗಳ ಪುಸ್ತಕ, ಕ್ಯಾಸೆಟ್‌ಗಳ ಮಾರಾಟದ ದಾಖಲೆಯಾಗಿದೆ.

ಈ ಬಾರಿಯ ಒಟ್ಟು ಬ್ರಹ್ಮೋತ್ಸವದ ಸ್ವಾಮಿ ಆದಾಯ 6 ಕೋಟಿ 73 ಲಕ್ಷ 55 ಸಾವಿರ ಎಂದು ಅಂದಾಜಿಸಲಾಗಿದೆ. ಇದರಲ್ಲಿ ಹುಂಡಿಯಿಂದ ರೂ 4,21,29,822/- ವಿಶೇಷಪ್ರವೇಶದ ಟಿಕೆಗಳ ಮಾರಾಟದಿಂದ ರೂ.1,64,34,638/- ಪ್ರಸಾದಗಳ ಮಾರಾಟದಿಂದ ರೂ. 87,90,722/- ಹೀಗೆ - ಒಟ್ಟು ರೂ. 67355182/- ಆಗಿದೆ. ಈ ಅವಧಿಯಲ್ಲಿ ತಿರುಮಲೆಯನ್ನು ಸಂದರ್ಶಿಸಿದವರ ಸಂಖ್ಯೆ 3,95,752 ಆಗಿದ್ದರೆ, ತಲೆಗೂದಲನ್ನು ನೀಡಿದವರು 159767 ಮಂದಿ. ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆಯಲ್ಲಿ 2,53,590 ಮಂದಿ ಉಚಿತ ಭೋಜನ ಪಡೆದರೆ, 4 ಲಕ್ಷ ಉಚಿತ ಲಾಡುಗಳ ವಿತರಣೆಯಾಯಿತು.

★★★★★



ತಿರುಮಲೆಯಲ್ಲಿ ಕೃತಕ ಜಲಪಾತವನ್ನು ನಿರ್ಮಿಸಲಾಗಿದ್ದು, ಆಂಧ್ರಪ್ರದೇಶದ ದೇವಾದಾಯಮಂತ್ರಿ, ಶ್ರೀ ದಂಡು ಶಿವರಾಮರಾಜು ಅವರು ಪ್ರಾರಂಭೋತ್ಸವ ನಡೆಸಿದರು.

# ಶ್ರೀಪಾದರಾಜರ ಆರನೆಯ ಶತಮಾನೋತ್ಸವಾರಂಭ



ಮುಳಬಾಗಿಲು ಸಮೀಪದ ನರಸಿಂಹತೀರ್ಥ ದಲ್ಲಿ ನೆಲೆಸಿರುವ ಹರಿದಾಸ ಸಾಹಿತ್ಯ ಪ್ರವರ್ತಕರಾದ ಶ್ರೀಪಾದರಾಜರ ಆರನೇ ಶತಮಾನೋತ್ಸವದ ಅಂಗವಾಗಿ 11-7-2001 ಬುಧವಾರದಂದು ''ಹರಿದಾಸ ಸಾಹಿತ್ಯ ಗೋಷ್ಠಿ ಹಾಗೂ ಶಿಬಿರ''ದ ಉದ್ಘಾಟನಾ ಸಮಾರಂಭವು ನಡೆಯಿತು.

ಕೋಲಾರ ಜಿಲ್ಲಾಧಿಕಾರಿಕೆ ಕೇಶವಾಚಾರಿ ಅವರು ಗೋಷ್ಠಿ ಹಾಗೂ ಶಿಬಿರವನ್ನು ದೀಪ ಬೆಳಗಿಸುವ ಮೂಲಕ ಉದ್ಘಾಟಿಸಿದರು.

'ಹರಿದಾಸ ಸಾಹಿತ್ಯವು ಸಮಾಜದ ಸುಧಾರಣೆಯಲ್ಲಿ ಬಹು ಪ್ರಮುಖ ಪಾತ್ರವನ್ನು ವಹಿಸಿದೆ. ಸಾಹಿತ್ಯವೊಂದು ಜ್ಞಾನ ಭಂಡಾರವಿದ್ದಂತೆ. ವಿಜ್ಞಾನವು ಎಷ್ಟೇ ಮುಂದುವರೆಯುತ್ತಿದ್ದರು ದೈವಿಕ ಶಕ್ತಿಯನ್ನು ಕಾಣಲು ಸಾಧ್ಯವಿಲ್ಲ. ಅದೇ ದೈವಿಕ, ದೇವರ ಶಕ್ತಿಯನ್ನು ಹರಿದಾಸ ಸಾಹಿತ್ಯದಿಂದ ಕಾಣಲು ಸಾಧ್ಯ'ವೆಂದು ನುಡಿದರು.

ಸೃಷ್ಟಿಕರ್ತನ ಉದ್ದೇಶ, ಹಿನ್ನಲೆ ಏನೆಂಬುದು ಯಾರಿಗೂ ತಿಳಿಯದ ಅಂಶ, ಅದು ಕೇವಲ ಭಗವಂತನಿಗೆ ಮಾತ್ರ ಗೊತ್ತು ಎಂದು ನುಡಿದ ಜಿಲ್ಲಾಧಿಕಾರಿಗಳು, ಜೀವನವನ್ನು ಸಮಾಜ ಸೇವೆಗೆ ಮೀಸಲಿಡಲು ಕರೆನೀಡಿ ಎಲ್ಲಾ ಧರ್ಮ ಗಳಿಗಿಂತಲೂ ಮಾನವ ಧರ್ಮ ಬಹು ದೊಡ್ಡದು ಎಂದು ನುಡಿದರು.



ಸಮಾರಂಭದ ಮುಖ್ಯ ಅತಿಥಿಗಳಾಗಿದ್ದ ವಿದ್ಯಾವಾಚಸ್ಪತಿ ಅರಳುಮಲ್ಲಿಗೆ ಪಾರ್ಥಸಾರಥಿ ಅವರು ಮಾತನಾಡಿ, ಇಂದು ಹರಿದಾಸ ಸಾಹಿತ್ಯವನ್ನು ಉಳಿಸಿ ಬೆಳೆಸುತ್ತಿರುವವರು ಮಹಿಳೆಯರು, ಅವರು ಭಗವಂತನ ಕುರಿತು, ಭಜನೆ, ಸಂಕೀರ್ತನೆಗಳಿಂದ ದಾಸಸಾಹಿತ್ಯವನ್ನು ಪ್ರಚುರಪಡಿಸುತ್ತಿದ್ದಾರೆ ಎಂದು ನುಡಿದರು.

ಸಮಾರಂಭದ ಅಧ್ಯಕ್ಷತೆಯನ್ನು ಪ್ರಭಾತ ಕಲಾವಿದರ ಅಧ್ಯಕ್ಷರಾದ ಟಿ.ವಿ. ದ್ವಾರಕಾನಾಥ್ ವಹಿಸಿದ್ದರು.

ಶ್ರೀಪಾದರಾಜ ಮಠಾಧೀಶರಾದ ಶ್ರೀ ವಿಜ್ಞಾನನಿಧಿತೀರ್ಥ ಸ್ವಾಮೀಜಿಗಳು, ಶ್ರೀಪಾದರಾಜರ ಆರನೇ ಶತಮಾನೋತ್ಸವ ಹಾಗೂ ಹರಿದಾಸ ಗೋಷ್ಠಿ ಮತ್ತು ಶಿಬಿರಗಳಿಂದ ದಾಸ ಸಾಹಿತ್ಯದ ಪ್ರಚಾರದ ಕುರಿತು ಮಾತನಾಡಿದರು.

ಹರಿದಾಸ ಸಾಹಿತ್ಯ ರತ್ನ ಎಸ್. ಜಿ. ರಾಮ ಚಂದ್ರರಾವ್, ಚಿಂಚೋಳಿ ಪ್ರಹ್ಲಾದಾಚಾರ್, ಚಲನಚಿತ್ರ ಪತ್ರಕರ್ತ ಡಿ.ವಿ. ಸುಧೀಂದ್ರ ಅವರಿಗೆ ಶಾಲು ಹೊದಿಸಿ ಸನ್ಮಾನಿಸಲಾಯಿತು.

ತಹಶೀಲ್ದಾರ್ ಎನ್. ಕೃಷ್ಣಪ್ಪ, ಗೋಷ್ಠಿಶಿಬಿರದ ಸಂಚಾಲಕರಾದ ಎಚ್.ಬಿ. ಲಕ್ಷ್ಮೀನಾರಾಯಣಾಚಾರ್, ಎಚ್.ಬಿ. ಜಯರಾಜ್ ಎಂ. ಜಿ. ವ್ಯಾಸರಾವ್ ಮುಂತಾದವರು ಭಾಗವಹಿಸಿದ್ದರು.

ಪಂಡಿತ ವಿಜಯ ಸಿಂಹಾಚಾರ್ಯರಿಂದ ಸ್ವಾಗತ ಮತ್ತು ರಾಜಲಕ್ಷ್ಮಿ ಪಾರ್ಥಸಾರಥಿ ಅವರಿಂದ ವಂದನೆಗಳಾಯಿತು. ಭಜನಾಮಂಡಳಿಯ ಶಾರದಾಬಾಯಿಯಿಂದ ಪ್ರಾರ್ಥನೆ ನಡೆಯಿತು.

★★★★★

Edited and Published on behalf of T. T. Devasthanams by Dr. N. S. Rama Murthy, and printed at T.T.D. Press
by I. Parvateeswara Rao, Manager, T. T. D. Press, Tirupati - 517 507.

# ತಿರುಮಲೆಯಲ್ಲಿ

## ಮಾಡಬೇಕಾದವು ಹಾಗೂ ಮಾಡಬಾರದವುಗಳು

### ಮಾಡಬೇಕಾದವು :

★ ತಿರುಮಲೆಗೆ ಬರುವ ಮುನ್ನ ನಿಮ್ಮ ಇಷ್ಟ ಅಥವಾ ಕುಲದೈವವನ್ನು ಪೂಜಿಸಿರಿ.

★ ನಿಮ್ಮ ಪ್ರಯಾಣದ ಟಿಕೆಟ್‌ಗಳನ್ನು, ತಿರುಮಲೆಯಲ್ಲಿ ನಿಮ್ಮ ವಸತಿಯನ್ನು ಮೊದಲೇ ಕಾಯ್ದಿರಿಸಿ.

★ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಮೊದಲು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ, ಅಲ್ಲಿಯೇ ಇರುವ ಶ್ರೀ ವರಾಹಸ್ವಾಮಿಯನ್ನು ದರ್ಶಿಸಿರಿ.

★ ಆಲಯವನ್ನು ಪ್ರವೇಶಿಸುವ ಮೊದಲು ಸ್ನಾನಮಾಡಿ, ಶುಭ್ರವಾದ ಉಡುಪು ಧರಿಸಿರಿ. ಆಲಯದ ಒಳಗಡೆ ಸ್ವಾಮಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿ.

★ ಆಲಯದ ಒಳಗಡೆ ಗಂಭೀರ ಮೌನವನ್ನು ಪಾಲಿಸಿರಿ ಮತ್ತು ಮನಸ್ಸಿನಲ್ಲಿ **''ಓಂ ನಮೋ ವೇಂಕಟೇಶಾಯ''** ಎಂದು ಜಪಿಸಿರಿ.

★ ತಿರುಮಲೆಯಲ್ಲಿ ಪಾಪನಾಶಿನಿಯಲ್ಲೂ, ಆಕಾಶಗಂಗೆಯಲ್ಲೂ ಸ್ನಾನಮಾಡಿರಿ.

★ ತಿರುಮಲೆಗೆ ಬಂದಾಗ ಪ್ರಾಚೀನಪರಂಪರೆಯನ್ನೂ ಆಚಾರವನ್ನೂ ಗೌರವಿಸಿ.

★ ಸಹಯಾತ್ರಿಕರಲ್ಲಿನ ಧಾರ್ಮಿಕ ಭಾವನೆಯನ್ನು ಗೌರವಿಸಿ, ಪ್ರೋತ್ಸಾಹಿಸಿ.

★ ತಮ್ಮ ಕಾಣಿಕೆಗಳನ್ನು ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿ.

★ ತಿರುಮಲೆಯಲ್ಲಿ ನಿಮ್ಮ ಸೇವೆ ಹಾಗೂ ಆಲಯದ ಬಗ್ಗೆ ವಿವರಗಳಿಗಾಗಿ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ಕೇಳಿ ವಿವರಗಳನ್ನು ಪಡೆಯಿರಿ.

### ಮಾಡಬಾರದವು :

★ ತಮ್ಮೊಂದಿಗೆ ಹೆಚ್ಚಿನ ಹಣ, ಆಭರಣಗಳನ್ನು ತರಬೇಡಿ.

★ ಮಾಂಸಾಹಾರವನ್ನು ಬಳಸಬೇಡಿರಿ. ಮಾದಕ ವಸ್ತು ಪೇಯಗಳನ್ನು ಬಳಸಬೇಡಿರಿ. ಧೂಮಪಾನ ಮಾಡಬೇಡಿರಿ.

★ ವಸತಿಗಾಗಿ, ಶೀಘ್ರದರ್ಶನಕ್ಕಾಗಿ ದಳ್ಳಾಳಿಗಳನ್ನು ಆಶ್ರಯಿಸಬೇಡಿರಿ.

★ ಆಲಯದ ಒಳಗೆ, ಹೊರಗೆ ಪಾದರಕ್ಷೆಗಳನ್ನು ಧರಿಸಿ ಓಡಾಡಬೇಡಿರಿ.

★ ದೇವರನ್ನು ಸೇವಿಸುವುದರ ಹೊರತು ಬೇರೆ ಯಾವ ಕಾರಣಕ್ಕೂ ತಿರುಮಲೆಗೆ ಬಾರದಿರಿ. ಸಂಪ್ರದಾಯದಂತೆ ಆಲಯ ಪ್ರವೇಶ ನಿಷೇಧವಿದ್ದಲ್ಲಿ ಆಲಯ ಪ್ರವೇಶ ಮಾಡದಿರಿ.

★ ದೇವರ ದರ್ಶನಕ್ಕಾಗಿ ನೂಕುನುಗ್ಗುಲು ಮಾಡದೆ ಸರತಿಯ ಸಾಲಿನಲ್ಲಿ ಸೇರಿರಿ.

★ ದೇವಾಲಯದಲ್ಲಿ ಉಗುಳುವುದೇ ಮುಂತಾದವುಗಳನ್ನು ಮಾಡದಿರಿ.

★ ಭಿಕ್ಷೆಯನ್ನು ಪ್ರೋತ್ಸಾಹಿಸದಿರಿ. ಹುಸಿ ಪ್ರಸಾದಗಳನ್ನು ಕೊಳ್ಳಬೇಡಿರಿ.

★ ತಿರುಮಲೆಯಲ್ಲಿ ಎಲ್ಲ ಹೂವುಗಳೂ ದೇವರಿಗೇ. ತಾವು ಹೂವು ಮುಡಿಯದಿರಿ.